# ಕರ್ಮವೀರ

ಜನಪ್ರಿಯ ಸಚಿತ್ರ ವಾರಪತ್ರಿಕೆ - ಹುಬ್ಬಳ್ಳಿ.

೨೦-೬-೪೯



ಬೆಲೆ ಎರಡಾಣೆ



ಕರ್ನಾಟಕದ ಕಡಲತಡಿಯ ಒಂದು ದೃಶ್ಯ.

Karmaveer KANNADA ILLUSTRATED WEEKLY

ಸಂಪುಟ ೨೧ | ಕರ್ಮವೀರ | ಸೋಮವಾರ
ಸಂಚಿಕೆ ೯ | | ಜೇಷ್ಠ ವ. ೧೦

ತಾರೀಕು ೨೦—೬—೧೯೪೯

## ಮುಖಪತ್ರದಲ್ಲಿ

ಕರ್ನಾಟಕದ ಕಡಲತಡಿಯ ಒಂದು ದೃಶ್ಯವಿದು. ಕಲ್ಪವೃಕ್ಷಗಳೇ ಅಲ್ಲಿಯ ಚಲ ಜ್ಜಲ ಚಟುವಟಿಕೆಯ ಹುರುಪಿನಕಡಲ್ಲಾನಿಕರ ಕೇತನ. 'ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆವುದು ನಾಡೊಂದು' ಎಂಬ ಶ್ರೀ ಕಡೆಂಗೋಡ್ಲು ಶಂಕರ ಭಟ್ಟರ ಛಂದೋಮಯ ವಾಣಿಯನ್ನೇ ಚಿತ್ರ ನಿದರ್ಶಿಸುತ್ತದೆ. ಜಡಿಮಳೆ ಸುರಿದು ಆಗ ತಾನೇ ನಿಂತ ಪ್ರಶಾಂತವಾದ ಚಾಂಬಟ್ಟಲಿನ ಪ್ರಭಾವಲಯದಲ್ಲಿ ಹಾಯಾಗಿ ಗರಿಗೆದರಿ ತಂಗಾಳಿಗೆ ವ್ಯಜನಿಕೆಯಾಗಿ ಮೆಲ್ಲಮೆಲ್ಲನೆ ಅತ್ತಿಂದಿತ್ತ ಆನೆಯಾಡುತ್ತ ನಿಂತ ತೆಂಗುಗಳ ಬುಡದ ಗಿಡಗಂಟೆಗಳ ನಡುವೆ ಮರಳು ದಿಣ್ಣೆಯಲ್ಲಿ ಒಕ್ಕಾಲೆತ್ತಿ ಒಬ್ಬ ಸಮುದ್ರಾವಲೋಕನ ತತ್ಪರನಾಗಿರುವುದನ್ನು ಕಂಡರೆ, ಅವನು ಹಾಗೇ ಕೆಲ ನಿಮಿಷಗಳಲ್ಲಿ ಕವಿಯಾಗಬಹುದು, ಶೃಂಗಾರಸುಂದರನಾಗಬಹುದು, ಉದಾತ್ತಭಕ್ತನಾಗಬಹುದು ಇಲ್ಲವೆ ಸ್ಥಿತಪ್ರಜ್ಞಯೋಗಿಯಾಗಬಹುದು ಎನಿಸುವುದಿಲ್ಲವೆ? ಅವ್ಯಕ್ತ ವಿಶ್ವಾತ್ಮನ ವ್ಯಕ್ತ ಸ್ವರೂಪ ಒಂದು ನಿಮಿಷ ಅಲ್ಲಾಡದ ಜಡಜಲವಾದರೆ, ಇನ್ನೊಂದು ನಿಮಿಷದಲ್ಲಿ ಜಂಝಾವಾತವಾಗಿ ಅಲ್ಲಾಡಿ ಸುತ್ತಣ ಸೃಷ್ಟಿಯನ್ನೇ ಅಲ್ಲಾಡಿಸಿ ಬಿಡುವುದು. ಆದರೆ ಕಲ್ಪವೃಕ್ಷಗಳು ಮಾತ್ರ ಕಿತ್ತು ಬೀಳದೆ 'ಅಚಲೋಯಂ ಸನಾತನಃ' ಎಂಬಂತೆ ತಲೆಯಲ್ಲಾಡಿಸುತ್ತ, ವಾತಾವರಣ ಪ್ರಸನ್ನವಾದೊಡನೆ 'ಬಾಗಿದವ ಬಾಳುವನು' ಎಂಬ ನೀತಿಯನ್ನು ಮುಂದ ಮುಂದ ಆಂದೋಲನದಿಂದ ಬೀಸಿ ಸಾರುವವು; ದಣಿದ ನೀರ್ವಾನಿಸರಿಗೆ, ಕಡಲ್ವಯಣಿಗರಿಗೆ ಹಾಲ್ಮೇಣಿನಂತಹ ಎಳನೀರುಗಳನ್ನು, 'ನಾರಿಕೇಳದ' ಫಲಗಳನ್ನು ಕೇಳದೆಯೇ ದಯೆಪಾಲಿಸುವುವು. ಸೌಂದರ್ಯವೆಂಬುದು ಕಣ್ಣುತ್ತೋ ಬಾಯ್ಯುತ್ತೋ— ಎಂಬುದನ್ನು ಅಂಥ ಸಮಯದಲ್ಲಿ ಯಾರು ಹೇಳಲಾರರು, ಯಾರು ಹೇಳಬಲ್ಲರು?

## ಕರ್ಮವೀರ

**ಪ್ರತಿ ಸೋಮವಾರ ಹುಬ್ಬಳ್ಳಿಯಿಂದ ಹೊರಡುವ ವಾರಪತ್ರಿಕೆ**

ಸಂಸ್ಥಾಪಕರು :
**ಶ್ರೀ. ರಂ. ರಾ. ದಿವಾಕರ**

ಸಂಪಾದಕರು :
**ಶ್ರೀ. ಹ. ರಾ. ಪುರೋಹಿತ**

**ಹೊಸ ವರ್ಗಣಿ ವಿವರಗಳು :**

| | |
|---|---|
| ೧ ವರ್ಷಕ್ಕೆ | ರೂ. ೬—೧೨—೦ |
| ೬ ತಿಂಗಳಿಗೆ | ರೂ. ೩—೮—೦ |
| ೩ ,, | ರೂ. ೨—೦—೦ |

ಬಿಡಿಸಂಚಿಕೆ : ೨ ಆಣೆ

ವ್ಹಿ. ಪಿ. ದ್ವಾರಾ ಕಳಿಸಿದರೆ ೦—೬—೦ ಹೆಚ್ಚು ಬೀಳುವದು.

**ಚಂದಾದಾರರು :** ತಮ್ಮ ವರ್ಗಣಿ, ಸಂಚಿಕೆಗಳ ತಲುಪುವಿಕೆಯ ಸಂಬಂಧದ ದೂರು ಮೊದಲಾದವುಗಳ ಬಗ್ಗೆ ಪತ್ರವ್ಯವಹಾರವನ್ನು ಮಾಡುವಾಗ ವಿಳಾಸದ ಚೀಟಿಯ ಮೇಲಿರುವ ಚಂದಾ ನಂಬರುಗಳನ್ನು ಉಲ್ಲೇಖಿಸಬೇಕು. ಇಲ್ಲದಿದ್ದರೆ ಸಾವಿರಗಟ್ಟಳೆ ಚಂದಾದಾರರಲ್ಲಿ ನಿಮ್ಮ ಹೆಸರನ್ನು ಕಂಡು ಹಿಡಿಯುವದು ಸಾಧ್ಯವಾಗದು.

**ಲೇಖಕರು:** "ಕರ್ಮವೀರ" ದಲ್ಲಿ ಪ್ರಕಟನೆಗಾಗಿ ಕಳಿಸುವ ಲೇಖ, ಕತೆ, ಕವಿತೆ ಮೊದಲಾದವುಗಳು ಅಸ್ವೀಕೃತವಾದಲ್ಲಿ ತಿರುಗಿ ಪಡೆಯಲಪೇಕ್ಷಿಸುತ್ತಿದ್ದರೆ ಲೇಖದ ಸಂಗಡಲೇ ಅವಶ್ಯವಿದ್ದಷ್ಟು ಅಂಚೆ ತಿಕೀಟುಗಳನ್ನು ಕಳಿಸಿರಬೇಕು. ಹಾಗೆ ಮಾಡದೆ ಮುಂದೆ ಆ ಲೇಖಗಳ ಬಗ್ಗೆ ಪತ್ರವ್ಯವಹಾರ ಮಾಡಿದರೆ ಅಥವಾ ತಿರುಗಿ ಕಳಿಸಬೇಕೆಂದರೆ ಅದು ಸಾಧ್ಯವಾಗದು. ಸ್ವೀಕೃತವಾದ ಕತೆಗಳಿಗೂ ಪೂರ್ವಾಕಾರದ, ಅಂದರೆ "ಕರ್ಮವೀರ"ದ ಎರಡು ಕಾಲಂ ಮೀರಿದ ಲೇಖನಗಳಿಗೂ ನಿರ್ದಿಷ್ಟ ಪ್ರತಿಫಲ ಕೊಡಲಾಗುವದು.

— ವ್ಯವಸ್ಥಾಪಕ,
"ಕರ್ಮವೀರ" ಹುಬ್ಬಳ್ಳಿ.

# ಬಂಗಾಲ ಶಾಸನಸಭೆಯ ಚುನಾವಣೆ

ಬಾಬು ಶರಚ್ಚಂದ್ರ ಬೋಸರು ಬಂಗಾಲ ಶಾಸನ ಸಭೆಯ ಉಪಚುನಾವಣೆಯಲ್ಲಿ ಪ್ರಚಂಡ ಬಹುಮತದಿಂದ ಆರಿಸಿಬಂದು ಕಾಂಗ್ರೆಸ್ಸಿಗೆ ಕಲಕತ್ತೆಯಲ್ಲಿ ಸೋಲುಂಟಾಯಿತು. ಕಳೆದ ಹಲವಾರು ತಿಂಗಳುಗಳಿಂದ ವಿಶೇಷತಃ ಈ ಚುನಾವಣೆಯ ಪ್ರಚಾರ ಕಾರ್ಯ ಪ್ರಾರಂಭವಾದಂದಿನಿಂದ ಕಲಕತ್ತೆಯಲ್ಲಿ ನಡೆದ ಘಟನೆಗಳನ್ನು ನಿರೀಕ್ಷಿಸಿದವರಿಗೆ ಈ ಪರಿಣಾಮದಿಂದ ಆಶ್ಚರ್ಯವೇನೂ ಎನಿಸದು. ಪರಾಜಯ ಹೊಂದಿದ ಕಾಂಗ್ರೆಸ ಪಕ್ಷವೂ ವಿಶೇಷವಾಗಿ ವಿಷಾದಪಡಬೇಕಿಲ್ಲ. ಶರಚ್ಚಂದ್ರರ ಪಕ್ಷದವರೂ ಅಷ್ಟೇನು ಜಂಭ ಕೊಚ್ಚಿಕೊಳ್ಳಬೇಕಿಲ್ಲ. ಏಕೆಂದರೆ ಈ ಚುನಾವಣೆಯಲ್ಲಿ ಕಾಂಗ್ರೆಸ ಪಕ್ಷಕ್ಕಿಂತ ಶರಚ್ಚಂದ್ರರ ವ್ಯಕ್ತಿತ್ವವೇ ಹೆಚ್ಚುಪ್ರಭಾವಶಾಲಿಯಾಗಿ ವಿಜಯವನ್ನು ಅವರಿಗೆ ಸಂಪಾದಿಸಿ ಕೊಟ್ಟಿತು. ಆದರೆ ಜನಸಾಮಾನ್ಯದ ನಿಶ್ಚಿತ ನಿರ್ಣಯವಿದೆಂದು ಹೇಳಲು ಬಾರದು. ಕಾಂಗ್ರೆಸ ಸಭೆಗಳನ್ನು ಮುರಿದುಬಿಡುವದು, ಕಾಂಗ್ರೆಸ ಧುರೀಣರನ್ನು ಮತ್ತು ಕಾರ್ಯಕರ್ತರನ್ನು ಗಾಯಗೊಳಿಸುವದು, ಮತದಾನಕ್ಕೆ ಬಂದಾಗ ಮತದಾರರನ್ನು ಭಯಭೀತರನ್ನಾಗಿ ಮಾಡುವದು ಮೊದಲಾದ ವಿಧ್ವಂಸಕ ಕೃತ್ಯಗಳು ಒಂದೇ ಸವನೆ ನಡೆದುದು ಕಾಂಗ್ರೆಸ ಹುರಿಯಾಳಿನ ಸೋಲಿಗೆ ಕಾರಣವೆಂದೂ ಹೇಳಬಹುದಾಗಿದೆ. ಈ ಬಗೆಯ ನಿಂದ್ಯಕೃತಿಗಳಿಂದ ಕಲಕತ್ತೆಯು ಅಹಿಂಸಾ ತತ್ವದಲ್ಲಿಯ ತನ್ನ ಶ್ರದ್ಧೆಗೆ ತಿಲಾಂಜಲಿ ಕೊಟ್ಟಿತೆಂದು ಹೇಳಬೇಕಾಗುವದು. ಇಂಥ ವಿಧ್ವಂಸಕ ಕೃತಿಗಳಿಗೆ ಇಲ್ಲವೆ ಘಟನೆಗಳಿಗೆ ಅವಕಾಶ ಕೊಡದೆ ಶರಚ್ಚಂದ್ರರ ಪಕ್ಷದವರು ವಿಜಯವನ್ನು ಸಂಪಾದಿಸಿದ್ದರೆ ನಿಜವಾಗಿ ಅದು ಅವರಿಗೆ ಭೂಷಣವಾಗುತಿದ್ದಿತು. ಕಮ್ಯುನಿಸ್ಟ ಪಕ್ಷದ ಬೆಂಬಲವನ್ನು ಪಡೆದು, ತಾವು ಅನೇಕ ವರುಷಗಳಿಂದ ಆಚರಿಸುತ್ತ ಬಂದ ಕಾಂಗ್ರೆಸ್ಸಿನ ತತ್ವ, ನೀತಿನಿಬಂಧನೆಗಳತ್ತ ಸ್ವಲ್ಪವೂ ಗಮನಿಸದೆ ಶರಚ್ಚಂದ್ರರ ಪಕ್ಷವು ವಿಜಯಶಾಲಿಯಾದುದು ಒಂದು ಬಗೆಯಿಂದ ಅವರಿಗೆ ಕಲಂಕಪ್ರಾಯವೇ. ಆದರೆ ಯುದ್ಧವಲ್ಲಿ ಮತ್ತು ಚುನಾವಣೆಗಳಲ್ಲಿ ನೀತಿ ನಿಯಮಗಳನ್ನು ನೋಡತಕ್ಕದ್ದಲ್ಲ ಎಂದು ಪ್ರತಿಪಾದಿಸುವವರ ದೃಷ್ಟಿಯಿಂದ ಈ ವಿಜಯವು ಅಭಿನಂದನೀಯವು. ಅದರಲ್ಲಿಯೂ ಕಾಂಗ್ರೆಸ್ಸಿನ ವರಿಷ್ಠರು ಪೂರ್ಣ ಬೆಂಬಲ ಕೊಟ್ಟಿದ್ದ ಹುರಿಯಾಳನ್ನು ಪ್ರಚಂಡ ಮತಗಳಿಂದ ಸೋಲಿಸಿ ಆರಿಸಿಬಂದಿದ್ದು ಅವರ ದೃಷ್ಟಿಯಿಂದ ಅತ್ಯಂತ ಅಭಿನಂದನೀಯವೆಂದು ಧಾರಾಳವಾಗಿ ಹೇಳಬಹುದು.

ಪರಿಸ್ಥಿತಿ ಹೀಗಿದ್ದರೂ ಕಾಂಗ್ರೆಸ್ಸಿನವರು ಈ ಸೋಲಿನಿಂದ ಒಳ್ಳೆ ಪಾಠ ಕಲಿಯಬೇಕಾಗಿದೆ. ತಮ್ಮ ಮತ್ತು ತಮ್ಮ ಅನುಜ ಸುಭಾಷಚಂದ್ರರ ವ್ಯಕ್ತಿತ್ವದಿಂದ ಕಲಕತ್ತೆಯಲ್ಲೆಲ್ಲ ಪ್ರಿಯರಾಗಿರುವ ಶರಚ್ಚಂದ್ರರ ವಿರುದ್ಧ ಹುರಿಯಾಳನ್ನು ನಿಲ್ಲಿಸುವ ಮೊದಲು ಕಾಂಗ್ರೆಸ ವರಿಷ್ಠರು ಇನ್ನಷ್ಟು ಆಳವಾಗಿ ವಿಚಾರ ಮಾಡಬೇಕಿದ್ದಿತು. ಕಾಂಗ್ರೆಸ ಕಾರ್ಯ ಸಮಿತಿಯಲ್ಲಿ ಈ ಪ್ರಶ್ನೆಯ ವಿಚಾರ ಹೊರಟಾಗ ಕಾಂಗ್ರೆಸ ವರಿಷ್ಠರು ಈ ಆಯ್ಕೆಯಲ್ಲಿ ಹೋರಾಡಬಾರದೆಂದು ಅಭಿಪ್ರಾಯಪಟ್ಟರೆಂದೂ ಆದರೆ ಬಂಗಾಲ ಕಾಂಗ್ರೆಸ ಪ್ರಮುಖರ ಆಗ್ರಹದ ಮೂಲಕ ಸ್ಪರ್ಧೆಗೆ ಒಪ್ಪಿಗೆ ಕೊಟ್ಟರೆಂದೂ ಹೇಳಲಾಗುತ್ತದೆ. ಇದು ನಿಜವಿದ್ದರೆ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪೂರ್ಣವಾಗಿ ತೂಗಿ ನೋಡದೆ ಬಂಗಾಲ ಕಾಂಗ್ರೆಸ ಸಮಿತಿಯವರು ದುಡುಕಿದ್ದುದು ಸರಿಯಲ್ಲೆಂದು ಹೇಳಬೇಕಾಗುವದು. ಇತ್ತೀಚೆ ಸಾಮಾನ್ಯವಾಗಿ ಎಲ್ಲೆಡೆ ಕಾಂಗ್ರೆಸ ಕಾರ್ಯಕರ್ತರ ಬಗ್ಗೆ ಜನ ಅಸಂತುಷ್ಟರಾದುದು ಕಂಡು ಬರುತ್ತಿದೆ. ಜನಗಳಿಗೆ ಅವಶ್ಯವಾಗಿ ಬೇಕಾಗುವ ಅನ್ನ, ಆಶ್ರಯ, ವಸ್ತ್ರಗಳ ಪೂರಯಿಕೆ ಸಾಕಷ್ಟು ಸಮಾಧಾನಕರವಾಗಿ ಆಗದ್ದರಿಂದ ಕಾಂಗ್ರೆಸ್ಸಿನ ಆಳಿಕೆಯ ಬಗ್ಗೆ ಜನರು ಅಸಮಾಧಾನಗೊಂಡಿರುವರು. ಅಲ್ಲದೆ ಕಾಂಗ್ರೆಸ್ಸಿಗರೂ ಮೊದಲಿನ ತಮ್ಮ ವಿಶುದ್ಧ ರೀತಿನೀತಿ ತತ್ವಗಳನ್ನು ಬಿಟ್ಟುಗೊಟ್ಟು ಸ್ವಾರ್ಥ, ಅಧಿಕಾರಲಾಲಸೆ ಮೊದಲಾದವುಗಳಿಗೆ ಬಲಿಬಿದ್ದುದರಿಂದ ಅದರ ಪ್ರತಿಷ್ಠೆ ಕಡಮೆಯಾಗಹತ್ತಿದೆ. ಈ ಪರಿಸ್ಥಿತಿಯಲ್ಲಿ ಆಯ್ಕೆಗೆ ತಮ್ಮ ಹುರಿಯಾಳನ್ನು ನಿಲ್ಲಿಸುವಾಗ ಆಳವಾಗಿ ವಿಚಾರಮಾಡುವದು ಅತ್ಯವಶ್ಯವಾಗಿದೆ. ಅದರಲ್ಲಿಯೂ ಬೇರೆ ಎಲ್ಲ ಪಕ್ಷಗಳೂ-ವಿಧ್ವಂಸಕ ಮನೋವೃತ್ತಿಯ ಕಮ್ಯುನಿಸ್ಟಪಕ್ಷವೂ- ಕೂಡಿಕೊಂಡು ಕಾಂಗ್ರೆಸ್ಸನ್ನು ಸೋಲಿಸಬೇಕೆಂದು ಪಣತೊಟ್ಟುಎಲ್ಲ ಬಗೆಯ ವಿಧ್ವಂಸಕ ಮಾರ್ಗಗಳನ್ನು ಕೂಡ ಅನುಸರಿಸಲು ಸಿದ್ಧವಾದಾಗ ಹೆಚ್ಚು ದಕ್ಷತೆ ವಹಿಸುವದು ಕ್ರಮಪ್ರಾಪ್ತವಾಗಿದ್ದಿತು. ಇಂಗ್ಲಂಡ ಅಮೇರಿಕೆ ಮೊದಲಾದ ರಾಷ್ಟ್ರಗಳಲ್ಲಿ ಇಂಥ ಗೆಲವು ಸೋಲುಗಳಿಗೆ ವಿಶೇಷ ಮಹತ್ವ ಕೊಡಲಾಗುತಿಲ್ಲವಾದರೂ ನಮ್ಮ ದೇಶದಲ್ಲಿ ಸದ್ಯದಲ್ಲಿ ಇದಕ್ಕೆ ಹೆಚ್ಚು ಗಮನ ಕೊಡಲಾಗುತಿರುವದರಿಂದ ಕಾರ್ಯಕರ್ತರು, ಧುರೀಣರು ಹೆಚ್ಚು ಜಾಗರೂಕತೆಯನ್ನು ವಹಿಸಬೇಕಾಗುವದು. ಆದುದರಿಂದ ಕಾಂಗ್ರೆಸ್ಸಿಗರು ಈ ಚುನಾವಣೆಯಿಂದ ಕೇವಲ ಖಿನ್ನಮನಸ್ಕರಾಗಿ ಕುಳಿತುಕೊಳ್ಳದೆ ಆತ್ಮಪರಿಶೀಲನೆ ಮಾಡಿಕೊಂಡು ಆದ ತಪ್ಪುಗಳನ್ನು ಸರಿಪಡಿಸಲು ಪ್ರವೃತ್ತರಾಗಬೇಕು. ಮೊದಲಿನ ತಮ್ಮ ಲೋಕಪ್ರಿಯತೆಯನ್ನು ಮತ್ತೆ ಗಳಿಸಲು ಅವಶ್ಯಕವಾದ ಸೇವೆ, ತ್ಯಾಗ, ನಿಃಸ್ವಾರ್ಥತೆ ಮೊದಲಾದ ಸದ್ಗುಣಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು. ಅಂದರೆ ಭಾವೀ ಚುನಾವಣೆಗಳಲ್ಲಿ ಈ ಬಗೆಯ ಸೋಲುಂಟಾಗದೆ ಪ್ರಚಂಡ ಬಹುಮತದಿಂದ ಕಾಂಗ್ರೆಸ್ಸು ಆರಿಸಿ ಬರುವಲ್ಲಿ ಸಂದೇಹವಿಲ್ಲ. ಮತದಾರರಾದರೂ ಸದ್ಯದಲ್ಲಿ ಕಾಂಗ್ರೆಸ್ಸೊಂದೇ ಸಂಘಟಿತವಾದ ಮತ್ತು ಸ್ವಾತಂತ್ರ್ಯಕ್ಕಾಗಿ ಒಂದೇ ಸವನೆ ಹೋರಾಡಿದ ಪಕ್ಷವೆಂಬುದನ್ನು ಮನದಂದು ಅದಕ್ಕೇ ಬೆಂಬಲ ಕೊಡಬೇಕಲ್ಲದೆ ಕೇವಲ ಮೋಹಕ ಮಾತುಗಳನ್ನು ಹೇಳುವ ಇಲ್ಲವೆ ಗಾಳಿಗೋಪುರಗಳಂತಹ ಆಶ್ವಾಸನೆಗಳನ್ನು ಕೊಡುವ ಉತ್ತರಕುಮಾರರಿಗೆ ಅಥವಾ ವಿಧ್ವಂಸಕ ಕೃತಿಗಳಿಂದ ಬೆದರಿಕೆ ಹಾಕುವಂತಹ ಪಕ್ಷಗಳಿಗೆ ಬೆಂಬಲಕೊಟ್ಟು ತಮ್ಮ ಮತಾಧಿಕಾರದ ದುರುಪಯೋಗ ಮಾಡಿಕೊಳ್ಳಬಾರದು. ಕಾಂಗ್ರೆಸ್ಸಿನ ಆಡಳಿತೆಯ ಮೂಲಕವೆ ರಾಷ್ಟ್ರವು ಇನ್ನೂ ಹಲವಾರು ವರುಷಗಳ ವರೆಗಾದರೂ ಪ್ರಗತಿಯನ್ನು ಪಡೆಯಬಲ್ಲುದೆಂಬುದು ನಿರ್ವಿವಾದವಾಗಿದೆ.

## ಮಂತ್ರಿಗಳ ವಿಚಾರಣೆ

ಮದರಾಸ ಪ್ರಾಂತದ ಮಂತ್ರಿಗಳು ತಮ್ಮ ಅಧಿಕಾರದ ದುರುಪಯೋಗಮಾಡಿದರೆಂಬ ಕೂಗು ಅಲ್ಲಲ್ಲಿ ಕೇಳಬರುತ್ತಿದ್ದುದರಿಂದಲೂ ಪ್ರಕಟನೆ ಮುಂತಾದವುಗಳು ಹೊರಬಿದ್ದುದರಿಂದಲೂ ಕಾಂಗ್ರೆಸ ಕಾರ್ಯಸಮಿತಿಯು ಕಾಂಗ್ರೆಸ ಕಾರ್ಯದರ್ಶಿಗಳಾದ ಶ್ರೀ ಶಂಕರರಾವ ದೇವ ಇವರನ್ನು ಈ ಆರೋಪಗಳ ಬಗ್ಗೆ ವಿಚಾರಮಾಡಿ ವರದಿಯನ್ನೊಪ್ಪಿಸಲು ಹೇಳಿರುವರು. ಶ್ರೀ ಶಂಕರರಾವ ದೇವ ಇವರು ಈಗಾಗಲೆ ಮದರಾಸಕ್ಕೆ ಹೋಗಿ ಪ್ರಾಸ್ತಾವಿಕ ವಿಚಾರಣೆಯನ್ನು ಪ್ರಾರಂಭಿಸಿರುವರು. ತಮ್ಮ ಮಂತ್ರಿಗಳ ವಿರುದ್ಧ ಎದ್ದ ದೂರುಗಳ ವಿಚಾರಣೆಯನ್ನು ಮಾಡಲು ಕಾಂಗ್ರೆಸ ಪಕ್ಷವು ಸಿದ್ಧವಾದುದು ನಿಜವಾಗಿ ಅಭಿನಂದನೀಯವಾಗಿದೆ. ತಪ್ಪು ಮಾಡಿದವರೆಷ್ಟೇ ದೊಡ್ಡವರಿರಲಿ ಅವರ ವಿರುದ್ಧ ಕ್ರಮಕೈಕೊಳ್ಳಲು ಕಾಂಗ್ರೆಸ್ಸು ತತ್ಪರವಿದೆಯೆಂಬುದನ್ನು ಜಗತ್ತಿನಲ್ಲೆಲ್ಲ ಸಾರಲು ಮುಂದಾದುದು ಅದರ ಉಜ್ವಲ ನೀತಿ ತತ್ವಗಳಿಗೆ ಒಗ್ಗುವಂತಹದೇ ಆಗಿದೆ. ತಮ್ಮ ಕಡೆಗೆ ಯಾವದೇ ಬಗೆಯ ದೂರು ಬಂದಿಲ್ಲ ಎಂದು ಮಂತ್ರಿವರ್ಯ ಗೋಪಾಳರೆಡ್ಡಿಯವರು ಶಾಸನಸಭೆಯಲ್ಲಿ ಹೇಳಿದ್ದುಂಟು. ಹೀಗಿದ್ದರೂ ವಿಚಾರಣೆಯು ಪ್ರಾರಂಭವಾಗಿದೆಯೆಂದಬಳಿಕ ಸಂಬಂಧಿಸಿದವರೆಲ್ಲ ಅದರಲ್ಲಿ ಭಾಗವಹಿಸಿ ತಮ್ಮ ತಮ್ಮ ಹೇಳಿಕೆಗಳನ್ನು ಕೊಡುವದು ಅವಶ್ಯವಾಗಿದೆ. ಈಗಾಗಲೆ ಶ್ರೀಪ್ರಕಾಶಂ, ಕಾರಂತ ಮೊದಲಾದವರು ತಮ್ಮ ಹೇಳಿಕೆಗಳನ್ನು ಕೊಟ್ಟಿರುವರು. ಇಂಗ್ಲಂಡ ಮೊದಲಾದ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಈ ಬಗೆಯ ದೂರುಗಳ ಪ್ರಶ್ನೆ ಎದ್ದಾಗ ವಿಚಾರಣಾಮಂಡಲವನ್ನು ನೇಮಿಸಿ ತಪ್ಪಿತಸ್ಥರೆಂದು ಕಂಡುಬಂದವರನ್ನೆಲ್ಲ ಶಿಕ್ಷಿಸುವದು ರೂಢಿಯಾಗಿದೆ. ಇಲ್ಲಿಯೂ ಆ ಬಗೆಯ ರೂಢಿಯನ್ನು ಹಾಕುವದು ಇಷ್ಟವೆಂದು ನಮ್ಮ ಅಭಿಪ್ರಾಯ. ಈಗ ಪ್ರಾರಂಭವಾದ ವಿಚಾರಣೆಯು ಆ ಬಗೆಯ ಪ್ರಯತ್ನದ ಮೊದಲ ಹೆಜ್ಜೆಯೆಂದು ಹೇಳಬಹುದು, ಮಂತ್ರಿಗಳ ವಿರುದ್ಧ ದೂರಿಕೊಳ್ಳುವವರೆಲ್ಲ ಶ್ರೀ ಶಂಕರರಾವ ದೇವ ಇವರಮುಂದೆ ತಮ್ಮ ಹೇಳಿಕೆಗಳನ್ನು ಒಪ್ಪಿಸತಕ್ಕದ್ದು. ಯಾವದೆ ಕಾರಣದಿಂದ ಹೀಗೆ ಮಾಡಲು ಮುಂದೆ ಬಾರದಿದ್ದವರು ಒಂದು ಬಗೆಯಿಂದ ಹೇಡಿ ಎನಿಸಿಕೊಳ್ಳುವರಲ್ಲದೆ ಅವಶ್ಯವಾಗಿ ಮಾಡಬೇಕಾದ ಕರ್ತವ್ಯವನ್ನು ಅವರು ಮಾಡಲಿಲ್ಲೆಂದಾಗುವದು. ಇಂಥವರಿಗೆ ಯಾವದೇ ಮಂತ್ರಿಯನ್ನು ಅಥವಾ ಅಧಿಕಾರಿಗಳನ್ನು ದೂರುವ ಹಕ್ಕು ಉಳಿಯಲಾರದು. ಈ ವಿಚಾರಣೆಯಿಂದ ಇಡೀ ರಾಷ್ಟ್ರವೇ ಎಚ್ಚೆತ್ತು ಪ್ರಜೆಗಳು ಅಧಿಕಾರಿಗಳು ಮತ್ತು ಮಂತ್ರಿಗಳು, ತಮ್ಮ ತಮ್ಮ ಪಾಲಿನ ಕರ್ತವ್ಯವನ್ನು ತಿಳಿದುಕೊಂಡು ವರ್ತಿಸುವಂತಾದರೆ ರಾಷ್ಟ್ರಹಿತವನ್ನು ಸಾಧಿಸಿದಂತಾಗುವದೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ:

## ಇನ್ನಾದರೂ ಸದ್ಬುದ್ಧಿ ಬರಲಿ

ಟ್ರಾನ್ಸವಾಲ ಹಿಂದೀ ಕಾಂಗ್ರೆಸ್ಸಿನ ಅಧ್ಯಕ್ಷರಾದ ಡಾ. ದಾದೂ ಇವರ ಪಾಸಪೋರ್ಟನ್ನು ತಿರುಗಿ ಕೊಡಬೇಕೆಂದು ಪ್ರಿಟೋರಿಯದ ಸುಪ್ರೀಂಕೋರ್ಟು ವಿಧಿಸಿದ ತೀರ್ಪಿನ ವಿರುದ್ಧ ದಕ್ಷಿಣ ಆಫ್ರಿಕೆಯ ಒಳಾಡಳಿತೆಯ ಮಂತ್ರಿಗಳಾದ ಟಿ. ಜಿ. ಡೋಂಗ್ಸ ಇವರು ಮಾಡಿದ ಅಪೀಲನ್ನು ಟ್ರಾನ್ಸವಾಲ ಸುಪ್ರೀಂಕೋರ್ಟು ಕಿತ್ತು ಹಾಕಿದೆಯೆಂದು ಪ್ರಸಿದ್ಧವಾದ ಸುದ್ದಿಯನ್ನು ಕೇಳಿ ಹಿಂದೀಯರಿಗೆ ಸಂತೋಷವಾಗುವದು ಸ್ವಾಭಾವಿಕ. ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರನ್ನು ಅಲ್ಲಿಯ ಸರಕಾರದವರು ಬಗೆಬಗೆಯಿಂದ ಛಳಿಸುತಿರುವುದು ನಿಜವಾಗಿಯೂ ಉದ್ವೇಗಜನಕವಾಗಿದೆ. ಅವರು ಅನುಸರಿಸುತಿರುವ ಮಾರ್ಗವು ಅನ್ಯಾಯದ್ದೂ ಅಕ್ರಮವೂ ಆಗಿದೆಂಬುದು ಇಂಥ ತೀರ್ಪುಗಳಿಂದ ಮಂದಟ್ಟಾಗಲು ಸಾಕು. ಯುಕ್ತ ರಾಷ್ಟ್ರಸಂಘದ ಅಧಿವೇಶನಕ್ಕೆ ಹೊರಟಿದ್ದ ದಾದೂ ಇವರ ಪಾಸಪೋರ್ಟನ್ನು ಸರಕಾರವು ಜಪ್ತಮಾಡಿ ನಾಗರಿಕ ಮೂಲಭೂತ ಹಕ್ಕು ಕಿತ್ತಿಕೊಂಡಿತೆಂದು ಹೇಳಬಹುದು. ಈ ತೀರ್ಪಿನಲ್ಲಿ ವರಿಷ್ಠ ನ್ಯಾಯಾಧೀಶರು ಸರಕಾರದ ಕೃತಿಯನ್ನು ತೆಗಳಿದ್ದುಂಟು. ವರ್ಣದ್ವೇಷದಿಂದ ಮದಾಂಧರಾಗಿರುವ ಆಫ್ರಿಕ ಸರಕಾರದವರು ಇಂಥ ತೀರ್ಪುಗಳಿಂದಲಾದರೂ ಬುದ್ಧಿಗಲಿತರೆ ಆಫ್ರಿಕೆಯಲ್ಲಿಯ ಹಿಂದೀ ಸಮಸ್ಯೆ ಬಗೆಹರಿದಂತಾಗುವದು. ಕಾಮನವೆಲ್ತ ರಾಷ್ಟ್ರಗಳು ಈ ಬಗೆಯ ವರ್ಣದ್ವೇಷಕ್ಕೆ ಅವಕಾಶ ಕೊಡದಂತೆ ನೋಡಿಕೊಂಡರೆ ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರ ಸಮಸ್ಯೆಯಷ್ಟೇ ಅಲ್ಲ ಉಳಿದ ರಾಷ್ಟ್ರಗಳಲ್ಲಿಯ ವರ್ಣದ್ವೇಷ ಮೊದಲಾದ ಜಟಿಲ ಪ್ರಶ್ನೆಗಳ ಇತ್ಯರ್ಥವೂ ಆಗುವದು. ಸಂಬಂಧಿಸಿದವರೆಲ್ಲ ಇತ್ತ ಗಮನಿಸುವರೆಂದು ನಂಬಲಾಗಿದೆ.

# ಜಾಗತಿಕ ರಾಜಕಾರಣದಲ್ಲಿ ಫಾರ್ಮೋಸಾ

## ದ್ವೀಪವಾಸಿಗಳ ಸ್ಥಿತಿಗತಿ-ಜಪಾನೀ ಆಳಿಕೆಯಿಂದಾದ ಲಾಭ-ಕುಮಿಂಟಾಂಗಿನ ಪರಾಜಯದ ಪರಿಣಾಮ-ವಿದೇಶೀಯರ ವಿಹ್ವಲತೆ

ಫಾರ್ಮೋಸಾದ ಫಲವತ್ತು, ಉದ್ಯಮ ಸಾಮುಗ್ರಿಗಳ ಆಕರತ್ವ, ಸಮರ ನೈತಿಕ ಪ್ರಾಮುಖ್ಯ ಇವನ್ನು ಅವಲೋಕಿಸಿ, ಚೀನೀ ರಾಷ್ಟ್ರೀಯ ಸರಕಾರಕ್ಕಾದ ಪರಾಜಯದ ಪರಿಣಾಮವಾಗಿ ಕಮ್ಯುನಿಸ್ಟರ ಕೈಗೆ ಅದು ಸೇರಲಿರುವ ಸಂಭವವನ್ನೆಣಿಸಿ ಅಮೇರಿಕದ ರಾಜಕಾರಣಿಗಳು ಚಿಂತಾಕ್ರಾಂತರಾಗಿದ್ದಾರೆ. ಫಾರ್ಮೋಸಾ ರಶಿಯದ ಕೈಗೆ ಹೋಗಬಹುದೆಂದೂ ಅವರ ಇನ್ನೊಂದು ಶಂಕೆ. ಈ ಭಯಶಂಕೆಗಳ ಹಿಂದೆ ಅಲ್ಲಿ ತಮ್ಮ ಬಂಡವಾಳ ಹಾಕಲು, ವೈಮಾನಿಕ ಮತ್ತು ನಾವಿಕ ಠಾಣೆಗಳನ್ನು ಸ್ಥಾಪಿಸಿಕೊಳ್ಳಲು ಅವಕಾಶ ದೊರೆಯದಂತಾಗುವುದೆಂಬ ದೊಡ್ಡ ಭಯ ಅಡಗಿದೆ ಎಂಬುದು ಸೂಕ್ಷ್ಮಮತಿಗಳಿಗೆ ಹೊಳೆಯದಿರದು.

ಫಾರ್ಮೋಸಾ ಅಥವಾ ತೈವಾನ್ ಎಂಬುದು ಚೀನಕ್ಕೂ ಜಪಾನಿಗೂ ನಡುವಿರುವ ಒಂದು ಅಂಡಾಕಾರದ ದ್ವೀಪ. ೧೮೯೫ ರಲ್ಲಿ ಶಿಮೊನೋಶೇಕಿಯ ಒಪ್ಪಂದದನ್ವಯ ಚೀನ ಅದನ್ನು ಜಪಾನಿಗೆ ಬಿಟ್ಟುಕೊಟ್ಟಿತು. ಆದರೆ ಎರಡನೆಯ ಜಾಗತಿಕ ಸಮರದ ಅನಂತರ ಕೈರೋ ಒಪ್ಪಂದದ ಪ್ರಕಾರ ಅದನ್ನು ಚೀನಕ್ಕೆ ಬಿಡಿಸಿಕೊಡಲಾಯಿತು. ಅಂದಿನಿಂದ ಚೀನೀ ಸರಕಾರ ಕಳಿಸಿದ ಗವರ್ನರ್ ಜನರಲ್ಲನ ಆಳಿಕೆಗೆ ತೈವಾನ್ ಒಳಪಟ್ಟಿದೆ.

ತೈವಾನಿನ ವಿಸ್ತಾರ ೧೩೮೯೦ ಚದುರ ಮೈಲುಗಳು. ಅಲ್ಲಿ ೬೦೮೩,೬೭೭ ಸ್ಥಳೀಯ ಚೀನೀಯರೂ ೪೩೧೮ ವಿದೇಶೀಯರೂ ವಾಸವಾಗಿದ್ದಾರೆ. ವಿದೇಶೀಯರಲ್ಲಿ ೩೫ ಬ್ರಿಟಿಶರೂ ಸ್ಥಳೀಯ ಚೀನೀಯರ ಲೆಕ್ಕದಲ್ಲಿ ೪ ಲಕ್ಷ ಜಪಾನಿಗಳೂ ಸೇರಿದ್ದಾರೆ. ಸುಮಾರು ೩॥ ಲಕ್ಷ ಜನರಿರುವ ತೇಪೆ, ತೈವಾನ್, ಕೀಲುಂಗ್ ಮತ್ತು ತಾಯ್ನುಗಳು ಪ್ರಮುಖ ನಗರಗಳೆನಿಸಿವೆ. ಚೀನಿಯೇ ಅಲ್ಲಿಯ ರಾಜಭಾಷೆ: ಆಡಳಿತೆಯ ಸೌಲಭ್ಯಕ್ಕಾಗಿ ಈ ನಡುಗಡ್ಡೆಯನ್ನು ೫ ಪ್ರಾಂತಗಳನ್ನಾಗಿ ವಿಭಜಿಸಲಾಗಿದೆ.

### ಜಪಾನೀ ಆಡಳಿತೆ

ಜಪಾನಿಗಳ ಆಡಳಿತೆಯಲ್ಲಿ ಈ ಫಲವತ್ತಾದ ದ್ವೀಪವು ಬಹಳಮಟ್ಟಿಗೆ ಸುಧಾರಣೆ ಹೊಂದಿತು. ಅವರ ಆಳಿಕೆಯಲ್ಲಿ ಜಪಾನಿಯನ್ನು ಕಲಿಸಲು ೧೪೩ ಶಾಲೆಗಳೂ ಚೀನಿಯನ್ನು ಕಲಿಸಲು ೭೮೮ ಶಾಲೆಗಳೂ ತೆರೆಯಲ್ಪಟ್ಟವು. ೧೯೨೮ ರಲ್ಲಿ ಒಂದು ವಿಶ್ವವಿದ್ಯಾನಿಲಯ ಕೂಡ ಸ್ಥಾಪಿಸಲ್ಪಟ್ಟಿತು. ಒಳ್ಳೆಯ ಮೋಟಾರುಗಾಡಿಗಳ ರಸ್ತೆ, ರೇಲ್ವೆ, ಬಂದರಿನ ಸೌಕರ್ಯ, ಸಾರ್ವಜನಿಕ ಸೌಧಗಳು, ಚಿಕಿತ್ಸೆಯ ಅನುಕೂಲತೆಗಳು, ಕೃಷಿಸುಧಾರಣೆ, ಉದ್ಯಮೀಕರಣ ಮುಂತಾಗಿ ನಾನಾ ರೂಪದ ಪ್ರಗತಿಯನ್ನು ತೈವಾನರು ಜಪಾನೀ ಆಡಳಿತೆಯಲ್ಲಿ ಸಾಧಿಸಿದರು. ಆದರೆ ಪ್ರಜಾಪ್ರಭುತ್ವದ, ಸ್ವರಾಜ್ಯದ ಶಕ್ತಿಯನ್ನು ಮಾತ್ರ ಅವರು ಬೆಳೆಸಿಕೊಳ್ಳಲಿಲ್ಲ. ಅವರ ವ್ಯಾಪಾರೋದ್ಯಮಗಳೆಲ್ಲ ಹೆಚ್ಚಾಗಿ ಜಪಾನಿನೊಡನೆಯೇ ಸಾಗುತ್ತಿತ್ತು.

ಮಹಾಯುದ್ಧಪೂರ್ವದಲ್ಲಿ ತೈವಾನಿನ ವ್ಯಾಪಾರ ಯುಗೋಸ್ಲೇವಿಯ ಅಥವಾ ತುರ್ಕಿಗಿಂತಲೂ ಹೆಚ್ಚಿತ್ತು. ಜನರ ಮುಖ್ಯ ವೃತ್ತಿ ಒಕ್ಕಲುತನ. ಅಕ್ಕಿ, ಸಕ್ಕರೆ, ಮತ್ತು ಹಣ್ಣುಹಂಪಲುಗಳು ಅವರ ಹೆಚ್ಚಿನ ನಿರ್ಯಾತದ ಸರಕುಗಳು. ಜಗತ್ತಿನಲ್ಲಿಯೇ ಅತಿ ಹೆಚ್ಚಿನ ನೈಸರ್ಗಿಕ ಕರ್ಪೂರದ ಆಗರ ತೈವಾನಿನಲ್ಲಿದೆ. ಆಹಾರ ಪೇಯಾದಿಗಳ ಶುದ್ಧೀಕರಣವೇ ಅಲ್ಲಿಯ ಮುಖ್ಯ ಉದ್ಯಮ. ಸಕ್ಕರೆ, ಮದ್ಯ, ಚಹಾ ಮುಂತಾದವನ್ನು ಕಾರಖಾನೆಗಳಲ್ಲಿ ಸಿದ್ಧಪಡಿಸುವುದು, ಸಾಮುದ್ರಿಕ ಆಹಾರ ಪದಾರ್ಥಗಳನ್ನೂ ಉಷ್ಣವಲಯದ ಹಣ್ಣುಗಳನ್ನು ಡಬ್ಬಿಗಳಲ್ಲಿ ತುಂಬಿಸುವುದು ಇವು ಅವರ ಮುಖ್ಯೋದ್ಯೋಗಗಳು.

ಪರ್ವತಪ್ರದೇಶವಿರುವುದರಿಂದ ಖನಿಜಗಳಿಗೂ ವಿದ್ಯುತ್ತಿಗೂ ತೈವಾನ್ ಒಳ್ಳೆಯ ಆಕರವೆನಿಸಿದೆ. ೪೦ ಕೋಟಿ ಮೆಟ್ರಿಕ್ ಟನ್ನಿನಷ್ಟು ಕಲ್ಲಿದ್ದಲು ಸಿಗುವಂತಿದೆ. ವಿದ್ಯುತ್ತನ್ನು ತೆಗೆದರೆ ೨೫ಲಕ್ಷ ಕಿಲೋವ್ಯಾಟಿನಷ್ಟಾಗಬಹುದು. ಪೆಟ್ರೋಲಿಯಂ ಖನಿಗಳು ಕೂಡ ಅಲ್ಲಿವೆ. ಜಪಾನಿಗಳು ಅಲ್ಲಿ ಅಲ್ಯುಮಿನಿಯಂ ಉದ್ಯಮವನ್ನು ಬೆಳೆಸಿದ್ದರು. ರಾಸಾಯನಿಕ ಮತ್ತು ಸಾವಿಕ ಉದ್ಯಮಗಳಿಗೂ ಅಲ್ಲಿ ಅವಕಾಶಗಳಿವೆ.

### ಅಮೇರಿಕದ ಚಿಂತೆ

ಶಾಂತಸಾಗರದ ತೀರದಲ್ಲಿರುವ ತೈವಾನಿಗೆ ಸಮರನೈತಿಕ ಪ್ರಾಶಸ್ತ್ಯ ಬಹಳವಿದೆ. ಉತ್ತರದಲ್ಲಿ ರಶಿಯದ ಸೀಮೆ, ಪಶ್ಚಿಮದಲ್ಲಿ ಜಪಾನೀ ಸಮುದ್ರ, ಪೂರ್ವದಲ್ಲಿ ಮಾತೃದೇಶವಾದ ಚೀನ ಮತ್ತು ಆಗ್ನೇಯದಲ್ಲಿ ಹಾಂಗ್‌ಕಾಂಗ್‌ನಂತಹ ಅಂತಾರಾಷ್ಟ್ರೀಯ ನೌಕಾಶಯವೂ ನೌಕಾಮಾರ್ಗಗಳೂ ಇವೆ. ಕೂಮಿಂಟಾಂಗ್ ಸರಕಾರ ಅಮೇರಿಕದ ಗೆಳೆತನದಲ್ಲಿದ್ದುದರಿಂದ ಅಮೇರಿಕನ್ನರು ಫಾರ್ಮೋಸಾ ದ್ವೀಪದತ್ತ ಹೆಚ್ಚು ಲಕ್ಷ್ಯ ಹಾಕಿದ್ದಿಲ್ಲ. ಈಗ ಚೀನದಲ್ಲಿ ಕಮ್ಯುನಿಸ್ಟರು ವಿಜಯಶಾಲಿಗಳಾಗುತ್ತಿದ್ದಾರೆ. ಅವರ ವಿದೇಶಧೋರಣ ಯಾವ ಬಗೆಯದಿರಬಹುದೆಂಬುದು ದುರೂಹ್ಯವಾಗಿದೆ. ಆದುದರಿಂದ ಅಮೇರಿಕದ ರಾಜಕಾರಣಿಗಳು ಚಿಂತಾತುರರಾಗಿದ್ದಾರೆ.

ಜಪಾನಿಗಳ ಕಾಲದಲ್ಲಿ ಅಲ್ಲಿಗೆ ಚೀನದಿಂದ ವಲಸೆ ಹೋಗಲು ತಡೆಯೊಡ್ಡಲಾಗಿತ್ತು. ಸಾಮಾನ್ಯ ತೈವಾನ್ ಪ್ರಜೆ ತನ್ನ ದ್ವೈಪಾಯನತೆ ಮತ್ತು ಸ್ವಾತಂತ್ರ್ಯ ಭಾವಗಳಿಂದ ಚೀನೀಯನಿಗಿಂತ ಭಿನ್ನನಾಗಿದ್ದಾನೆ. ಜಪಾನೀ ಆಳಿಕೆ ಮುಗಿದು ಚೀನೀ ಗವರ್ನರ್ ಜನರಲ್ ಚೆನ್‌ಯೀ ಆಳತೊಡಗಿದಾಗ ೧೯೪೭ ರಲ್ಲಿ ತೈವಾನ್ ಪ್ರಜೆಗಳು ದಂಗೆಯೆದ್ದರು. ಆ ದಂಗೆಯನ್ನು ಚೀನೀ ಸರಕಾರ ಅಡಗಿಸಿ ಅವನ ಬದಲು ಡಾ. ವೇ ತಾವ್ ಮಿಂಗರನ್ನು ಗವರ್ನರ್ ಜನರಲ್ಲರನ್ನಾಗಿ ನಿಯಮಿಸಿತು.

ಅಮೇರಿಕ ರಶಿಯಗಳ ನಡುವಿನ ಇಂದಿನ ಸಂಬಂಧವನ್ನು ಅವಲೋಕಿಸಿದರೆ, ಚೀನೀ ರಾಷ್ಟ್ರೀಯ ಸರಕಾರ ಇಲ್ಲವೆ ಅಮೇರಿಕಕ್ಕೆ ಪೇಚುಬರುವ ಸಂಧಿಯೊದಗುವಂತಿದ್ದರೆ ಅದರ ಲಾಭವನ್ನು ರಶಿಯವು ಪಡೆಯದಿರದೆಂದು "ಕರೆಂಟ್ ಹಿಸ್ಟರಿ"ಯಲ್ಲಿ ರಸ್ಸೆಲ್ ಎಚ್. ಫಿಫೀಲ್ಡರು ಪ್ರತಿಪಾದಿಸಿದ್ದಾರೆ. ರಶಿಯದ ರಾಯಭಾರಿ ಫಾರ್ಮೋಸಾದಲ್ಲಿ ಇಲ್ಲವಾದರೂ ಅದರ ವ್ಯಾಪಾರವ್ಯವಹಾರ ಫಾರ್ಮೋಸಾದೊಡನೆ ಅತ್ಯಲ್ಪವಾದರೂ ಅಲ್ಲಿಯ ವಿದ್ಯಮಾನಗಳನ್ನು ಅದು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸುತ್ತಿದೆಯೆಂದು ಅವರ ಹೇಳಿಕೆ. ಫಾರ್ಮೋಸಾದಲ್ಲೇನಾದರೂ ಕಮ್ಯುನಿಜಂ ಬೆಳೆದರೆ ಮುಗಿದೇಹೋಯಿತು. ಅದು ನಿಮಿಷಾರ್ಧದಲ್ಲಿ ರಶಿಯದ ಹಸ್ತಗತವಾಗದಿರದೆಂದು ಅವರ ಹೆದರಿಕೆ. ಕಮ್ಯುನಿಜಂ ಅಲ್ಲಿ ಸದ್ಯಃ ಪ್ರಚುರವಿಲ್ಲ. ಶ್ರೀ ಹ್ಸೂಹಂಗ್ ಎಂಬೊಬ್ಬಳು ಮಾಸ್ಕೋ ಶಿಕ್ಷಣ ಪಡೆದ ನೇತ್ರಿಯಾಗಿ ಅಲ್ಲಿ ಕೆಲಸ ಮಾಡುತ್ತಿದ್ದಾಳೆ. ಸರಕಾರದ ದೌರ್ಬಲ್ಯದಿಂದ (ಅದರ ದೌರ್ಬಲ್ಯ ಆಗಲೇ ಪ್ರಕಟವಾಗಿದೆ.) ತೈವಾನಿನಲ್ಲಿ ಅಸ್ತವ್ಯಸ್ತತೆಯುಂಟಾದರೆ ಮಹಾರಾಷ್ಟ್ರಗಳು ಅದರ ರಾಜಕಾರಣದಲ್ಲಿ ಬಾಯಿಹಾಕಬೇಕಾಗಿ ಬರಬಹುದೇನು ತಮ್ಮ ಆಶಾಬದ್ಧ ಸಂಶಯವನ್ನು ಉಕ್ತ ಲೇಖಕರು ವ್ಯಕ್ತಮಾಡಿದ್ದಾರೆ.

### ಭವಿಷ್ಯ

ಹಾಂಕಾಂಗಿನ ಪರಿಸ್ಥಿತಿ ಇನ್ನೂ ನಿರ್ಣಯವಾಗಲಿದೆ. ಚೀನದ ಸುತ್ತಲಿನ ನಡುಗಡ್ಡೆಗಳಲ್ಲಿ ವಿದೇಶೀಯರ ಆಧಿಪತ್ಯವಿರುವದನ್ನು ವಿಜಯಶಾಲಿಗಳಾದ ಚೀನೀ ಕಮ್ಯುನಿಸ್ಟರು ಒಪ್ಪಲಾರರೆಂಬುದು ಇಲ್ಲಿಯ ವರೆಗಿನ ಅವರ ಚಿಕ್ಕ ಚಿಕ್ಕ ಕೃತಿಗಳಿಂದ ಕಂಡುಬಂದಿದೆ. ಆದರೆ ಇಷ್ಟರ ಮೇಲಿಂದ ಒಮ್ಮಿಂದೊಮ್ಮೆ ಅವರು ಹಾಂಕಾಂಗಿನ ಮೇಲಾಗಲಿ ಇತರ ಪರಾಕ್ರಾಂತ ಭಾಗಗಳ ಮೇಲಾಗಲಿ ಶಸ್ತ್ರಪ್ರಯೋಗ ಮಾಡಿಯಾರೆಂಬುದನ್ನು ಹೇಳಲು ಬಾರದು. ಆದರೆ ಫಾರ್ಮೋಸಾದ ಬಗ್ಗೆ ಹಾಗೆ ಹೇಳಲಳವಲ್ಲ. ಅದು ಚೀನೀ ರಾಷ್ಟ್ರೀಯ ಸರಕಾರದ ಆಳಿಕೆಯಲ್ಲಿರುವದರಿಂದ ಅದರ ಸೋಲು ಫಾರ್ಮೋಸಾವನ್ನು ಸಹಜವಾಗಿ ಕಮ್ಯುನಿಸ್ಟರ ಕೈಗೆ ಒಪ್ಪಿಸುತ್ತದೆ. ಆ ಸಂದರ್ಭದಲ್ಲಿ ಶಾಂತಸಾಗರದ ತೀರಪ್ರದೇಶದ ಮುಖ್ಯ ಸಮರನೈತಿಕ ಸ್ಥಳವೂ ವಿಮಾನ ಮತ್ತು ನೌಕೆಗಳ ನಿಲ್ದಾಣವೂ ಎನಿಸಿದ ಫಾರ್ಮೋಸಾದಲ್ಲಿ ಅಮೇರಿಕ ಬ್ರಿಟನ್ನುಗಳು ಕೈಹಾಕಲು ಪ್ರಯತ್ನಿಸಬಹುದೆಂದು ಊಹಿಸಲು ಕಾರಣವಿದೆ. ಆದರೆ ಅದರಲ್ಲಿ ಅವರು ಜಯಶಾಲಿಗಳಾಗುವುದು ಅಸಂಭವವೆಂದೇ ಹೇಳಬೇಕಾಗುತ್ತದೆ. ಏಕೆಂದರೆ, ಕಮ್ಯುನಿಸ್ಟರೊಡನೆ ನಿಷ್ಠುರ ಕಟ್ಟಿಕೊಳ್ಳಲು ಅಮೇರಿಕಕ್ಕಾಗಲಿ, ಬ್ರಿಟನ್ನಿಗಾಗಲಿ ಇಷ್ಟವಿಲ್ಲವೆಂಬುದು ಆಗಲೇ ಅವರೊಡನೆ ವ್ಯಾಪಾರಾದಿಗಳ ಸಂಪರ್ಕವನ್ನಿಟ್ಟುಕೊಳ್ಳಬೇಕೆಂದು ಅವು ಆಲೋಚಿಸುತ್ತಿರುವುದೇ ಸಾಕ್ಷಿ. ನೇರವಾದ ಸೈನಿಕ ಪ್ರತಿಭಟನೆಯನ್ನು ಕೈಕೊಳ್ಳದೆ ಚೀನದ ಭಾವೀ ಕಮ್ಯುನಿಸ್ಟ್ ರಾಜ್ಯವನ್ನು ಯುಗೋಸ್ಲೇವಿಯದ ಟಿಟೋವಿನಂತೆ ಮಾಡಿ ರಶಿಯದ ಎದುರು ನಿಲ್ಲಿಸಬೇಕೆಂಬುದೇ ಆಂಗ್ಲೋ-ಅಮೇರಿಕನ್ನರ ಇಂದಿನ ಹಂಚಿಕೆ. ಈ ಪ್ರಯತ್ನ ಸಫಲವಾದೀತೆಂಬ ಆಶೆಯಿಂದಾದರೂ ಅವರು ಫಾರ್ಮೋಸಾದ ಬಗ್ಗೆ ಹೆಚ್ಚಿನ ಕಲಹಕ್ಕೆ ಎಡೆಗೊಡರು. ಇನ್ನು ತದ್ವಿರುದ್ಧವಾಗಿ ಕಲಹಕ್ಕೆ ಕೈಹಾಕಿದರೆ ಮಾತ್ರ ರಶಿಯ ಸುಮ್ಮನಿದ್ದೀತೆಂದು ಹೇಳುವುದು ಅಸಾಧ್ಯ. ಆಗ ಮಹಾರಾಷ್ಟ್ರಗಳ ತೊಡಕುಗಳಲ್ಲಿ ಘರ್ಷಣೆ ಹೆಚ್ಚಿ ಅಂತಾರಾಷ್ಟ್ರೀಯ ವಾತಾವರಣದಲ್ಲಿ ಹೆಚ್ಚಿನ ಬಿಸಿ ಉಂಟಾಗದಿರದು. —ಅರ್ಜುನ

---

※ ಅಧಿಕಸಂಬಳ ಹಾಗು ತುಟ್ಟಿ ಭತ್ತೆಗಾಗಿ ಇದೇ ಜುಲೈ ೧೪ ರಿಂದ ಲಖನೌದಲ್ಲಿಯ ಅಸೋಸಿಯೇಟೆಡ್ ಆಸ್ಪತ್ರೆಯ ಮತ್ತು ಗಾಂಧಿ ಸ್ಮಾರಕ ಆಸ್ಪತ್ರೆಯ ೨೮೦ ಜನ ನೋಕರರು ಸಂಪು ಹೂಡಲಿರುವರು. ಕೆಳವರ್ಗದವರ ಸೇವೆಯು ಅನವಶ್ಯಕ ಸೇವೆಯಲ್ಲಿ ಪರಿಗಣಿಸಲಾಗುವದೆಂದು ಸರಕಾರದವರು ಸಾರಿದ್ದಾರೆ.

※ ೧೨ಲಕ್ಷ ಎಕರೆ ನೀರುಣ್ಣುವ ಗಂಡಕ ನದಿಯ ಕಾಲುವೆ ಯೋಜನೆಯ ಬಗ್ಗೆ ಬಿಹಾರ ಸರಕಾರದವರು ವಿಚಾರ ನಡೆಸಿರುವರೆಂದು ತಿಳಿಯುತ್ತದೆ. ೫ ವರ್ಷಗಳಲ್ಲಿ ಈ ಯೋಜನೆ ಮುಗಿಯಲಿದ್ದು ೨೨-೨೫ ಕೋಟಿ ರೂಪಾಯಿ ವೆಚ್ಚ ತಗಲಬಹುದೆಂದು ಅಂದಾಜು ಇದೆ.

※ ೧೯೪೯ ನೇ ಇಸ್ವಿಯ ಬಿಹಾರ ಸರಕಾರದ ಸಾರ್ವಜನಿಕ ಸುರಕ್ಷಿತತೆ ಕಾಯದೆಯು ಅಕ್ರಮವಿರುವದೆಂದು ಫೆಡರಲ್ ಕೋರ್ಟಿನವರು ತೀರ್ಪು ಕೊಟ್ಟದ್ದರಿಂದ ಬಿಡುಗಡೆ ಹೊಂದಿದ ಮೂವರನ್ನು ಪೋಲೀಸರು ಹೊಸ ಆರ್ಡಿನನ್ಸಿನನ್ವಯ ಸೆರೆ ಹಿಡಿದರು. ಬಿಹಾರ ಸರಕಾರದವರು ಇದೇ ತಾನೆ ಹೊಸ ಸುಗ್ರೀವಾಜ್ಞೆಯನ್ನು ಹೊರಡಿಸಿರುವರು.

※ ಹೈದರಾಬಾದದ ಪ್ರಶ್ನೆಯನ್ನು ವಿಚಾರಿಸಲ ತಮಗೆ ಅಧಿಕಾರವೆ ಇಲ್ಲವೆಂದು ಭದ್ರತಾ ಮಂಡಲವು ಸಂದೇಹ ವ್ಯಕ್ತಮಾಡಿದರೆ ಅಂತರ್ ರಾಷ್ಟ್ರೀಯ ನ್ಯಾಯಾಲಯಕ್ಕೆ ಅದನ್ನು ಒಯ್ಯಲು ತಾವು ಸಿದ್ಧರಿರುವದಾಗಿ ಪಾಕಿಸ್ತಾನ ಸರಕಾರದ ವಿದೇಶ ಮಂತ್ರಿಗಳಾದ ಸರ್ ಝಫರುಲ್ಲಾಖಾನರು ಅಭಿಪ್ರಾಯಪಡುತಿರುವರು.

---

# ಗೆರಟೆಯ ಲಳಿಗೆ

ಲೇ: ಶ್ರೀ ಸಂಜೀವ ದೇವರಾವ್ ಕೇಳಕರ ಬಿ. ಎಸ್. ಸಿ., ಬಿ. ಟಿ.

ನೀವು ಗೆರಟೆಯ (ಕರಟೆಯ) ಗುಂಡಿಗಳನ್ನೂ ಸರಪಣಿ ವಗೈರೆಗಳನ್ನೂ ಮಾಡಿರಬಹುದು. ಈಗ ನೀವು ಬೇರೆ ಯಾವುದಾದರೂ ಹೊಸ ವಸ್ತುವನ್ನು ಮಾಡಲು ಆತುರರಾಗಿರಲೂ ಬಹುದು.

ಬೇಕಾದ ಉಪಕರಣಗಳು:- ಸಣ್ಣ ಗರಗಸ ಅಥವಾ ಹಿಂದೆ ಹೇಳಿದ ಪ್ರಕಾರದಂತೆ ಒಂದು ಚೂಪಾದ ಚೂರಿ, ಸುತ್ತಿಗೆ, ಉಪ್ಪುಕಾಗದ (Sand paper rough and smooth) ಒಂದು ಮೃದು ಮರದ ತುಂಡು (an odd piece of soft wood) ತಾಮ್ರದ ತಂತಿಯ ತುಂಡು (ಸುಮಾರು ೧೮" ದಪ್ಪ.)

ವಿಧಾನ:- ಗರಗಸದಿಂದ ಗೆರಟೆಯ ಎರಡು ತುಂಡುಗಳನ್ನು (ಒಂದೇಸಮವಾಗಿರುವಹಾಗೆ) ಕತ್ತರಿಸುವದು. ಅದನ್ನು ಜಾಗ್ರತೆಯಿಂದ ಸಮಭುಜದ (Rhombus-diamond) ಆಕೃತಿಯಲ್ಲಿ ಕತ್ತರಿಸುವದು. ಚಿತ್ರ ೧, ೨, ೩. ಆ ಎರಡೂ ತುಂಡುಗಳನ್ನು ಒಂದರ ಮೇಲೆ ಒಂದು ಇಟ್ಟು ಮಧ್ಯದಲ್ಲಿ ಸುಮಾರು ೧/೮" ಅಂತರದಲ್ಲಿ ಎರಡು ತೂತುಗಳನ್ನು (ತಾಮ್ರದ ತಂತಿಯ ದಪ್ಪಕ್ಕೆ ಸರಿಯಾಗಿ, ಎರಡೂ ಸಮಭುಜವಾಗಿ ಕತ್ತರಿಸಿದ ತುಂಡುಗಳಲ್ಲಿ ಇದ್ದ ಸ್ಥಳದಲ್ಲಿ ತೆಗೆಯುವದು. ಚಿತ್ರ ೪. ಚಿತ್ರ ೫ ರಲ್ಲಿ ತೋರಿಸಿದಂತೆ ಆ ಎರಡೂ ತುಂಡುಗಳನ್ನು ಇಟ್ಟು, ಆ ಎರಡು ತುಂಡುಗಳ ಮಧ್ಯದ ಗಾತ್ರವನ್ನು (Thickness) ತೆಗೆದು ಅದಕ್ಕಿಂತಲೂ ಸ್ವಲ್ಪ ದೊಡ್ಡದಾಗಿರುವ ಒಂದು ತುಂಡನ್ನು ಮೃದುಮರದತುಂಡಿನಿಂದ ತೆಗೆಯತಕ್ಕದ್ದು. ಈ ಮರದ ತುಂಡನ್ನು ಆ ಗೆರಟೆಯ ತುಂಡುಗಳ ಮಧ್ಯದಲ್ಲಿಟ್ಟು ಆ ಮರದ ತುಂಡಿಗೂ, ಗೆರಟೆಯ ತುಂಡುಗಳಿಗೂ ಹಾಗೂ ಗೆರಟೆಯ ತುಂಡುಗಳ ಕೊನೆಗಳಲ್ಲಿಯೂ ಸಂದು ಕಾಣಿಸದಿರುವ ಹಾಗೆ ಅದರಿಂದ ಉಜ್ಜುವದು (ಚಿತ್ರ ೬ x ಗುರ್ತು ಇರುವ ಕಡೆಗಳಲ್ಲಿ ಸಂದು ಕಾಣಿಸಬಾರದು). ಅನಂತರ ಆ ಮರದ ತುಂಡನ್ನು ಸರಿಯಾಗಿ ಅರದಿಂದ ಉಜ್ಜಿ (ಬದಿಗಳನ್ನು ಮಾತ್ರ) ಚಿತ್ರ ೭ ರಲ್ಲಿ ತೋರಿಸಿದಂತೆ ಮಾಡುವದು. ಈ ಮರದ ತುಂಡನ್ನು ಒಂದು ತಯಾರಾದ ಗೆರಟೆಯ ತುಂಡಿನ ಕೆಳಗೆ ಇಟ್ಟು ಅದರ ಅಳತೆಯಂತೆಯೇ ಆ ಮರದ ತುಂಡಿನಲ್ಲಿಯೂ ಎರಡು ತೂತುಗಳನ್ನು ತೆಗೆಯುವದು. ಈಗ ಮರದ ತುಂಡನ್ನು ಆ ಎರಡೂ ಗೆರಟೆಯ ತುಂಡುಗಳ ಮಧ್ಯದಲ್ಲಿ ಇಟ್ಟು ತೆಗೆದ ತೂತುಗಳು ಒಂದೇ ಸಮನಾಗಿರುವದೋ ಎಂದು ಖಾತ್ರಿ ಮಾಡಿದ ನಂತರ ಆ ಗೆರಟೆಯ ತುಂಡುಗಳನ್ನು ತೆಗೆದು ಅದರ ಹೊರಬದಿಯ ಮೇಲೆ (Convex side) ಚೂರಿಯಿಂದ ಚಿತ್ರ ೮ ರಲ್ಲಿ ತೋರಿಸಿದಂತೆ ಅದರ ತೂತುಗಳನ್ನು ಸ್ವಲ್ಪ ದೊಡ್ಡದು ಮಾಡುವದು (ತೂತಿನ ಮೇಲ್ಭಾಗಕ್ಕಿಂತಲೂ ಕೆಳಭಾಗದ ವ್ಯಾಸವು ಕಡಿಮೆ ಇರತಕ್ಕದ್ದು). ಈಗ ತಾಮ್ರದ ತಂತಿಯ ಎರಡು ತುಂಡುಗಳನ್ನು ಮರದ ತುಂಡಿಗಿಂತಲೂ ೧/೮" ಉದ್ದ ಮಾಡತಕ್ಕದ್ದು. ಆ ತಂತಿಯ ತುಂಡುಗಳನ್ನು (ಗೆರಟೆಯ ತುಂಡುಗಳ ಮಧ್ಯದಲ್ಲಿ ಮರದ ತುಂಡುಗಳನ್ನು ಇಟ್ಟು) ಗೆರಟೆಯ ಮತ್ತು ಮರದ ತುಂಡಿನ ಮಧ್ಯದೊಳಗಿನಿಂದ ಹಾಕತಕ್ಕದ್ದು. ಹಾಕಿದ ನಂತರ ಸುತ್ತಿಗೆಯಿಂದ ಮೆಲ್ಲಗೆ ಬಡಿದು (light taps) ಎರಡೂ ಕಡೆಗಳಲ್ಲಿ ಬಿಗಿ ಹಿಡಿಯುವ ಹಾಗೆ (Rivet) ಮೊಳೆ ಬಡಿಯುವದು. ಅನಂತರ ಅರದಿಂದಲೂ ಉಪ್ಪುಕಾಗದಗಳಿಂದಲೂ ಉಜ್ಜಿ ನಯ ಮಾಡತಕ್ಕದ್ದು. ಇದೋ ನಿಮ್ಮ ಲಳಿಗೆಯ ಅಟ್ಟಿ (Shuttle) ತಯಾರಾಯಿತು. (ಚಿತ್ರ ೧೦) ಈ ಲಳಿಗೆಯಿಂದ ಬಹಳ ಕೆಲಸಗಳನ್ನು ಮಾಡಬಹುದು. ವಿಶೇಷವಾಗಿ ಎಂಪರೆ 'ಟಿಟ್ಟಿಂಗ (Tatting)' ಎಂಬ ರೀತಿಯಿಂದ ಸುಂದರವಾದ ಕಲಾಬತ್ತು (lace) ಮಾಡಬಹುದು.

ಚಿಕ್ಕ ಕತೆ

# ನನ್ನನ್ನು ಬಯಸಿದ ಹುಡುಗಿ

ಲೇ: ಶ್ರೀ ಸೇವ ನಮಿರಾಜಮಲ್ಲ, ಬಿ. ಎ. [ಆನರ್ಸ್]

ನಾನು ಊರುಬಿಟ್ಟು ಹೋಗಿ ಇದು ಆರನೇ ವರುಷ. ನೋಡೋಣ, ಊರಿನ ವಾತಾವರಣದಲ್ಲೇನಾದರೂ ಬದಲಾವಣೆ-ಕ್ರಾಂತಿಗಳು ಸಂಭವಿಸಿದೆಯೋ, ನನ್ನನ್ನು ಹಗೆಯ ಹಾವಿನಂತೆ ನೋಡುತಿದ್ದವರ ಈ ಹೃದಯ ಪರಿವರ್ತನೆಯಾಗಿದೆಯೇ, ಯಾರ್‍ಯಾರು ಸತ್ತರು, ಯಾರ್‍ಯಾರು ಹೊಸದಾಗಿ ಹುಟ್ಟಿರುವರು— ಇತ್ಯಾದಿಗಳನ್ನು ತಿಳಿಯುವ ಕುತೂಹಲ ಈ ವರುಷ ಉಕ್ಕೇರಿತು.

ಊರಿಗೆ ಈಗ ನಾನು ಮರಳುವಾಗ ಊರಿಂದ ತೆರಳುವಾಗ ಇದ್ದುದಕ್ಕಿಂತ ಎಷ್ಟೋ ಪಾಲು ದೊಡ್ಡ ಜನ ನಾನು. ಆದರೆ ಊರವರಿಗೆ ಇದೆಲ್ಲ ತಿಳಿಯಬಾರದೆಂದು ನನ್ನ ಇತ್ತೀಚೆಗಿನ ವೇಷಗಳಾದ ಉದ್ದಾದ ಇಜಾರು, ಉದ್ದಿಯ ಕೋಟು, ಬೂಟ್ಸು-ಇವುಗಳನ್ನೆಲ್ಲ ಪೆಟ್ಟಿಗೆಯೊಳಗಿಟ್ಟುಕೊಂಡು ಬೀಗಹಾಕಿ ನನ್ನ ಊರಿನ ವೇಷವಾದ ಬರೇ ಅಂಗಿ ಧೋತರಗಳನ್ನು ಮಾತ್ರ ಉಟ್ಟುಕೊಂಡೆ. ಹಾಗಾಗಿ ನನ್ನನ್ನು ನೋಡಿದವರಿಗೆಲ್ಲ ನನ್ನ ಗುರುತು ಕೂಡಲೆ ಸಿಕ್ಕಿತು. ಒಬ್ಬ ಹೇಳಿಯೂ ಬಿಟ್ಟ. "ನೀನು ಗೊಮ್ಮಟ್ಟರಾಯನ ಹಾಗೆ ಮಹಾರಾಯಾ: ಮಳೆ, ಬಿಸಿಲು, ಸಮಯಗಳು ನಿನ್ನಲ್ಲಿ ಏನೂ ಬದಲಾವಣೆ ತರಲಾರವು!" ಎಂದ.

ಊರಿನ ಸುದ್ದಿ ಸಿಗಬೇಕಾದರೆ ನಾನು ಹಿಂದೆಯೂ ಫಕೀರ ಬ್ಯಾರಿಗಳ ಅಂಗಡಿಗೆ ಹೋಗುವದು ವಾಡಿಕೆ. ಅದೊಂದು ಚಿಕ್ಕ ಅಂಗಡಿ. ನನ್ನಷ್ಟು ಬಿಳಿಚರ್ಮದವರು ಅಲ್ಲಿಗೆ ಹೋಗುವದು ಕಡಿಮೆ. ಅದೂ ನಾನು ಈಗ ಇಷ್ಟು ದೊಡ್ಡ ಜನವಾಗಿ ಬಂದಮೇಲಂತೂ ಅಲ್ಲಿಗೆ ಹೋಗುವದೆಂದರೆ ಮಹಾ ಅಪರಾಧವೇ ಮತ್ತು ನನ್ನ ಬಾಲ್ಯದ ಸಹಪಾಠಿಗಳು ಗೆಳೆಯರುಗಳು ಎಷ್ಟೋ ದೊಡ್ಡ ದೊಡ್ಡ ಅಂಗಡಿಗಳನ್ನು ಕಟ್ಟಿಸಿ ಮಾಳಿಗೆಗಳನ್ನು ಹಾಕಿ, ಹಣವನ್ನು ಅದಕ್ಕಿಂತಲೂ ಎತ್ತರಕ್ಕೆ ರಾಶಿ ಹಾಕಿದವರಿದ್ದಾರೆ. ಅವರಲ್ಲಿ ಹೋದರೆ ನನಗೆ ಬಹಳ ಮನ್ನಣೆಯಿದೆ- "ಒಂದು ಕಾಫಿ"ಯ ಉಪಚಾರ ಕೂಡ ಸಿಗುವದು. ಆದರೆ ನನಗೇನೋ ವ್ಯಾಪಾರಸ್ಥರೆಂದರೆ ಕಳ್ಳಸಂತೆಯವರೆಂಬ ತಾತ್ಸಾರದೃಷ್ಟಿ- ಹಿಂದೆಯೂ ನಾನು ಅವರಲ್ಲಿಗೆ ಹೋಗುತ್ತಿದ್ದಿಲ್ಲ; ಅವರ ಹಾಸಿಗೆಯ ಆಸನದ ಬದಲಾಗಿ ಫಕೀರ ಬ್ಯಾರಿಗಳ ಗೋಣೀ ಚೀಲ ಹಾಕಿದ ಮಣ್ಣಿನ ಜಗಲಿಯನ್ನೇ ನಾನು ಇಚ್ಛಿಸುತಿದ್ದೆ.

ಫಕೀರ ಬ್ಯಾರಿಗಳು ನಾನು ಹೋದೊಡನೆ ಎಂದಿನಂತೆ ಒಂದು ದೊಡ್ಡ ಸಲಾಮು ಕೊಟ್ಟರು. ಆಮೇಲೊಂದು ತಾನೇ ಕಟ್ಟಿದ ಬೀಡಿಯನ್ನು ಕೈಗಿತ್ತರು. ಇವೆಲ್ಲ ವಾಡಿಕೆಯ ಉಪಚಾರ. ಆ ಮೇಲೆ ನನ್ನ ಕ್ಷೇಮಸಮಾಚಾರಗಳು ಇತ್ಯಾದಿ ಇತ್ಯಾದಿ ನಡೆದು ಕೊನೆಗೆ ಆಲಿಸ್ ಬಾಯಿಯ ವರ್ತಮಾನ ಹೇಳಿದರು: ಅವಳು ತನ್ನನ್ನು ಮದುವೆಯಾಗಲು ಬಂದವರನ್ನೆಲ್ಲ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿ, ಕಡೆಗೆ ಯಾರಿಗೋ ಒಬ್ಬನನ್ನು ಮದುವೆಯಾಗುವದೆಂದು ಈಗ ನಿಶ್ಚಯಿಸಿರುವಳಂತೆ.

ನನ್ನ ನೆನಪು ಮರಳಿತು. ಆಲಿಸಳ ಅಣ್ಣ ಜುವಾಂಪೀಂತ ನನ್ನ ಒಳ್ಳೆಯ ಗೆಳೆಯ. ನಮಗೆ ಹಿಂದೆ ಬಹಳ ಸ್ನೇಹವಿತ್ತು. ದಿನವಿಡೀ ಹರಟೆ, ಆಗಾಗ್ಗೆ ದೂರ ಪ್ರವಾಸಗಳನ್ನು ನಾವು ನೋಡುತಿದ್ದೆವು. ಜುವಾಂಪೀಂತನೂ ನನ್ನಷ್ಟೇ ಪ್ರಾಯದವ. ಸ್ವಲ್ಪ ಹಣವುಳ್ಳವನೂ ಹೌದು. ನನಗೆಷ್ಟೋ ಬಾರಿ ಹಣದ ಸಹಾಯವನ್ನು ಕೂಡಾ ಮಾಡಿದ್ದ. ಫಕೀರ ಬ್ಯಾರಿಗಳಿಗೆ ಮರುದಿನ ಬರುತ್ತೇನೆಂದು ಹಾರೈಸಿ, ಜುವಾಂಪೀಂತನಲ್ಲಿಗೆ ಹೊರಟೆ.

ಜುವಾಂಪೀಂತನ ಮನೆ ದೊಡ್ಡಮನೆ. ಅವರು ಒಳ್ಳೇ ಹೆಸರಾದವರು, ಅವರ ಜಾತಿಯವರಲ್ಲಿ ಹೆಚ್ಚಿನವರು, ನಮ್ಮೂರಲ್ಲಿರುವವರ ಪೈಕಿ ಬಡವ್ರೆತರು. ಜುವಾಂಪೀಂತ ತಂದೆ ಮಿಂಗೇಲಿ ಅಪೀಂತರು ಮಾಡಿದ ಆಸ್ತಿ ಅದು. ಅವರಿಗೆ ನಾಲ್ಕೈದು ಜನ ಹೆಣ್ಣುಮಕ್ಕಳು. ಎಲ್ಲರೂ ಗೋವೆಯ ಪೋರ್ತುಗೀಸರ ಸಂತಾನದವರಂತೆ. ಅವರನ್ನು ನೋಡುವಾಗ ಬಿಳಿ ಜನರಂತೆ ಕಾಣುತ್ತಿದ್ದರು. ಆಲಿಸಳಿಗೂ ನೀಲಿ ಬಣ್ಣದ ಕಣ್ಣು, ಕೆಂಡುಗೂದಲು, ಹಿಡಿದರೆ ರಕ್ತಬರುವಂಥ ಚರ್ಮಗಳಿದ್ದವು. ಅದರ ಜೊತೆಗೆ ಅವರಿಗೆಲ್ಲ ಸಾಕಷ್ಟು ಇಂಗ್ಲೀಷು ವಿದ್ಯಾಭ್ಯಾಸವೂ ಪಟ್ಟಣದಲ್ಲಿ ನಡೆದಿತ್ತು.

ಮೊದಲ ಇಬ್ಬರು ಮಕ್ಕಳನ್ನು ಜುವಾಂಪೀಂತರು ಮದುವೆ ಮಾಡಿಸುವಾಗ ತುಂಬ ಹಣ ಖರ್ಚಾಗಿತ್ತು. ವರದಕ್ಷಿಣೆಯ ಎಂಟು ಸಾವಿರ ರೂಪಾಯಿಗಳನ್ನು ತೀರಿಸಲು ಅವರು ಆಸ್ತಿಯ ಒಂದಂಶ ಮಾರಬೇಕಾಯಿತು. ಹೀಗಾಗಿ ಬಡತನ ಮೆಲ್ಲನೆ ಕಾಲಿಕ್ಕುತ್ತಿತ್ತು. ಪಟ್ಟಣದಲ್ಲಿ ಕಲಿಯುತಿದ್ದ ಜುವಾಂ ಮತ್ತು ಆಲಿಸರನ್ನು ಅರ್ಧದಲ್ಲಿಯೇ ಸಾಲೆ ಬಿಡಿಸಬೇಕಾಯಿತು.

ಆದುದರಿಂದ ನನಗೂ ಜುವಾಂಪೀಂತನಿಗೂ ಗೆಳೆತನ ಬೆಳೆಯಲು ಕಾರಣ. ಅಳಿದ ಊರಿಗೆ ಉಳಿದ ಅರಸನಂತೆ ನಮ್ಮೂರಿನಲ್ಲಿ ನಾನೇ ಮೊದಲು ಮ್ಯಾಟ್ರಿಕ್ ಪಾಸಾದವ. ಜುವಾಂಪೀಂತನಿಗೆ ಇಂಗ್ಲೀಷ್ ಭಾಷೆ, ನಡತೆಗಳು ಬಹಳ ಇಷ್ಟ. ಆಲಿಸಳದ್ದೂ ಅದೇ ನಮೂನೆ. ನಮಗೆ ಮೊದಲ ಸಲ ದಾರಿಯಲ್ಲಿ ಪರಿಚಯವಾದ ಕೂಡಲೇ ಗಾಢಮೈತ್ರಿ ಬೆಳೆಯಿತು. ಹಾಗೆ ಮೈತ್ರಿಯಿರುವಾಗಲೇ ತಲೆತಪ್ಪಿಸಿಕೊಂಡ ನಾನು ಈಗ ಬಂದುದು ಮರಳಿ.

ಜುವಾಂಪೀಂತ ನನ್ನನ್ನು ಕಾಯುತ್ತಿರುವವನಂತೆ ದಾರಿ ನೋಡುತಿದ್ದ. ನನ್ನನ್ನು ಕಂಡೊಡನೆ ಬಂದು ಅಪ್ಪಿ ಹಿಡಿದು ನಮಸ್ಕರಿಸಿ ಮನೆಯೊಳಗೆ ಕರೆದುಕೊಂಡು ಹೋದ. ಅವನಿಗೆ ಆಗಲೇ ಮದುವೆಯಾಗಿ ಎರಡು ಮಕ್ಕಳು ಹುಟ್ಟಿದ್ದವು! ಒಂದನ್ನು ನನ್ನ ಕೈಗಿತ್ತ.

ಮತ್ತು ಮಾತನಾಡಿದೆವು. ಅವನಿಗೂ ನನ್ನೊಡನೆ ಹೇಳುವ ಎಷ್ಟೋ ಸುದ್ದಿಗಳಿದ್ದುವು! ನನಗೂ ಹಾಗೆಯೇ. ಮಾತನಾಡುತ್ತ ನನಗೆ ಊಟದ ಸಮಯವಾಯಿತು. ಹೋಗುತ್ತೇನೆಂದೆ:

"ಓ, ನಮ್ಮ ಜಾತಿ ಬೇರೆ. ಊರು ಬಿಟ್ಟರೂ ನೀವು ಜಾತಿ ಬಿಟ್ಟಿಲ್ಲ!" ಎಂದು ಜುವಾಂಪೀಂತ ವ್ಯಂಗ್ಯವಾಗಿ ನಕ್ಕ.

ಹೀಗೆ ಮೊದಲೆಷ್ಟೋ ಬಾರಿ ಅವನು ನನಗೆ ಹೇಳಿದುದಿತ್ತು. ನಮ್ಮ ಬೇರೆ ಯಾವ ವ್ಯವಹಾರದಲ್ಲೂ ಈ ಜಾತಿಯ ಪ್ರಶ್ನೆ ಮುಂದೆ ಬರುತ್ತಿದ್ದಿಲ್ಲ. ಖಾನಾವಳಿಯಲ್ಲಿ ಕಾಫಿ ಸಮೇತ ಒಟ್ಟಿಗೆಕುಡಿಯುತ್ತಿದ್ದೆವು: ಫಲಾಹಾರ ಮಾಡುತ್ತಿದ್ದೆವು. ಆದರೆ ಊಟ ಮಾತ್ರ ನಾನು ನನ್ನ ಮನೆಯಲ್ಲೇ. ಜುವಾಂಪೀಂತನಿಗೆ ನನ್ನ ಮನೆಯಲ್ಲಿ ಊಟ ಮಾಡಲು ಯಾವ ಅಡ್ಡಿಯೂ ಇದ್ದಿಲ್ಲ. ನಾನು ಮಾತ್ರ ಅವನಲ್ಲಿ ಊಟ ಮಾಡಲಾರೆ. ಅವನು ಮುಖ್ಯತಃ ಮಾಂಸಾಹಾರಿಯಾದುದರಿಂದ ಈ ರೂಢಿ ಆಗಿರಬೇಕು.

ನಾನು ಊಟವನ್ನು ಮನೆಯಲ್ಲೇ ತೀರಿಸಿದೆ. ಜುವಾಂಪೀಂತನಿಗೆ ನನ್ನ ವರ್ತನೆ ಎಂದಿಗಿಂತ ಹೆಚ್ಚಿಗೆ ನೋವನ್ನುಂಟು ಮಾಡಿರಬೇಕು— ಅವನ ನೂತನ ಸಂಸಾರದ ಆತಿಥ್ಯವನ್ನು ನಾನು ಸ್ವೀಕರಿಸದಿದ್ದುದಕ್ಕೆ.

ಆ ದಿನ ನನಗೆ ಬೆಳಿಗ್ಗೆ ನೋಡಸಿಗಳೇ ಇಲ್ಲ. ಅವಳ ಕುರಿತಾಗಿ ನಾನು ಜುವಾಂಪೀಂತನೊಡನೆ ಕೇಳಲೂ ಇಲ್ಲ. ಹಾಗೆ ಕೇಳುವದು ನಮ್ಮಿಬ್ಬರ ರೂಢಿಗೆ ವಿರೋಧವಾಗಿರದಿದ್ದರೂ ನನಗೆ ಈ ಹೊಸದಾಗಿ ಹುಟ್ಟಿದ್ದ ಪ್ರತಿಷ್ಠೆ ಅವನಲ್ಲಿ ಮುಂಚಿನಷ್ಟು ಸಲಿಗೆಯನ್ನುಂಟು ಮಾಡಲು ಬಿಡಲಿಲ್ಲ. ಆದರೂ ಅವನಾಗಿಯೇ, ಅವಳಿಗೆ ಮದುವೆಯ ನಿಶ್ಚಯವಾಗಿದೆಯೆಂದು ಹೇಳಿ ಬಿಟ್ಟಿದ್ದ.

ಸಂಜೆ ಪುನಃ ನಾನು ಅವನ ಮನೆಗೆ ಹೋಗುವಾಗ ದಾರಿಯಲ್ಲಿ ಒಂದು ಸುಂದರವಾದ ಹೆಂಗಸು ಇದಿರಾಗಿ ಬರುತ್ತಿತ್ತು. ನನಗೆ ಗುರುತು ಸಿಗಲಿಲ್ಲ; ಅದರ ವೇಷ ಭೂಷಣಗಳೆಲ್ಲ ನಗರದ ಜನರದ್ದು; ಹೊಸ ನಮೂನೆಯ ಬಣ್ಣದ ಸೀರೆ- ಚಂದವಾಗಿ ಬಾಚಿದ ತಲೆಗೂದಲು, ಕಾಲಲ್ಲಿಮೆಟ್ಟು, ಕೈಯ್ಯಲ್ಲಿ ವಾಚು, ಶುಭ್ರ ಮುಖ. ವ್ಯಕ್ತಿ ನನ್ನ ಹತ್ತಿರ ಹತ್ತಿರ ಬಂತು.

ಅವಳಾಗಿ ನನಗೆ ನಮಸ್ಕರಿಸದಿದ್ದರೆ ನಾನು ಅವಳನ್ನು ಮತ್ತೂ ಗುರುತಿಸುತ್ತಿದ್ದಿಲ್ಲ. ನಾನು ಹತ್ತಿರ ಬಂದೊಡನೆ ಅವಳು ಸ್ವಲ್ಪ ದೂರ ನಿಂತು ನಗುತ್ತ ಕೈಜೋಡಿಸಿದಳು. ನನಗೆ ಆಗ ದಂಗುಬಡಿದಿತ್ತು.

"ಜೊ! ಏನು ಗುರುತು ಸಿಗಲಿಲ್ಲವೇ?"

ಸ್ವರದಲ್ಲಿ ನನಗೆ ಪರಿಚಯವಿತ್ತು. ನಾನು ವಿಸ್ಮಯದಿಂದ ಅವಳನ್ನು ಕಾಲಿನಿಂದ ತಲೆಯವರೆಗೆ ಎರಡು ಮೂರು ಸಲ ನೋಡಿದೆ: ಆ ತೆಳುವಾದ ನಸುಗೆಂಪು ಬಣ್ಣದ ಸೀರೆ, ಕಾಲಿಗೆ ಹಾಕಿದ ಮೆಟ್ಟುಗಳ ಎಡೆಯಿಂದ ಕಾಣುತ್ತಿದ್ದ ಆ ಬಿಳಿ ಪಾದಗಳು- ಮೇಲೆ ಮನೋಹರವಾಗಿ ಎದ್ದು ನಿಂತಿರುವ ಎದೆ, ರಟ್ಟೆಯನ್ನು ಬರಿದಾಗಿ ಬಿಟ್ಟಿದ್ದ ಆ ಆಕಾಶ ಬಣ್ಣದ ರವಿಕೆ, ಕುತ್ತಿಗೆಯ ಮೇಲೆ ನಲಿದಾಡುವ ಚಿತ್ರಮಯ ಸರ, ಉರುಟಾದ ಮುಖ, ಅಗಲವಾದ ಹಣೆ, ನೀಲಿ ಕಣ್ಣುಗಳು ಉದ್ದಕ್ಕೆ ಹೆಣೆದಿರುವ ಜಡೆ- ಇವೆಲ್ಲ ನನ್ನ ಕಣ್ಣುಗಳಿಗೆ ಗುರುತಿಸಲು ಸಾಕಾಗಿದ್ದುವು.

"ಆಲಿಸ್?"

ಹೌದು ಅವಳೇ! ನಾನವಳನ್ನು ಹಿಂದಿನ ಬಾರಿ ಕಂಡಾಗ ಅವಳು ಸೀರೆಯುಡುತ್ತಿದ್ದಿಲ್ಲ. ಬದಲಾಗಿ ಲಂಗ ಹಾಕಿಕೊಳ್ಳುತಿದ್ದಳು. ಅದರಲ್ಲಿ ಕಾಣುತಿದ್ದ ಅವಳ ಚೆಲುವೇ ಬೇರೆ: ಸದಾ ಹತ್ತು-ಹನ್ನೆರಡು ವರುಷದ ಹುಡುಗಿಯ ನೆನೆಪು ನನಗಿದ್ದುದು. ಎಂಥ ಬದಲಾವಣೆ ಇದು!

ಅವಳಿಗೂ ತನ್ನಲ್ಲಾದ ಈ ಪ್ರತಿಕ್ರಿಯೆ ಗೋಚರಿಸಿರಬಹುದು: ಏಕೆಂದರೆ ನಾನು ಸುಮಾರು ಹೊತ್ತಿನ ತನಕ ಅವಳನ್ನು ನೋಡುತ್ತಲೇ ಇದ್ದೆ ವಿನಾ ತುಟಿ ಬಿಚ್ಚಿ ನಾರಲಿಲ್ಲ.

"ಯಾವಾಗ ಬಂದಿರಿ?"

"ಇವತ್ತು ಆಲಿಸ್"

"ನಾನು ನಿಮ್ಮನ್ನು ನೋಡದೆ ಬಹಳ ಸಮಯವಾಯಿತು."

"ಹೌದು, ನಾನುನಿನ್ನನ್ನು ನೋಡಿದಿಯೂ ಅಷ್ಟೇ ಸಮಯವಾಯಿತು." ಸ್ವಲ್ಪಹೊತ್ತಿನವರೆಗೆ ನಾವಿಬ್ಬರೂ ಪುನಃ ಮಾತನಾಡಲಿಲ್ಲ.

"ನಿನಗೆ ಅಭಿನಂದನೆಗಳು ಆಲಿಸ್! ನಿನಗೆ ಮದುವೆಯಂತೆ ಅಲ್ಲವೇ?"

"ಧನ್ಯವಾದಗಳು ತುಂಬ" ಎಂದು ತಲೆ ತಗ್ಗಿಸಿ ಉತ್ತರಿಸಿದಳು.

ಅವಳು ನೀಳವಾಗಿ ಇಳಿಬಿಟ್ಟಿದ್ದ ಜಡೆಯ ತುದಿಯನ್ನು ಕೈಯಲ್ಲಿ ಅಮುಕುತಿದ್ದಳು. ನನಗೆ ನೋವು ಸುರುವಾಗಿತ್ತಾಗ.

ಮತ್ತೂ ಸ್ವಲ್ಪಹೊತ್ತು ನಿಂತಳು. ಬಹುಶಃ ನನ್ನಲ್ಲೂ ಕೆಲ ಹೊಸ ಮಾರ್ಪಾಟುಗಳು ಅವಳಿಗೆ ಕಂಡಿರಬಹುದು: ಅದರಲ್ಲಿ ಮೊದಲನೆಯದು ನನ್ನ ಮಾತಿನ ಮಿತಿ.

"ಕ್ಷಮಿಸುವೆಯಾ, ಆಲಿಸ್?" ಎಂದು ಅರ್ಥಪೂರ್ಣವಾಗಿ ಕೇಳಿದೆ.

ಅವಳ ಕಣ್ಣುಗಳು ದೊಡ್ಡದಾದುವು. ಮುಖ ಕೆಂಪೇರಿತು. ನನ್ನ ಪ್ರಶ್ನೆ ಅವಳಿಗೆ ಅರ್ಥವಾಗಿದೆಯೆಂದು ನನಗೆ ಚೆನ್ನಾಗಿಗೊತ್ತು.

ಕೆಲವು ದಾರಿಹೋಕರು ಆಗ ಅತ್ತಿತ್ತ ಹೋದುದರಿಂದ ಅವಳಿಗೆ ಒಮ್ಮೆಯೇ ಉತ್ತರಿಸಲಾಗಲಿಲ್ಲ, ಸಂಕೋಚದಿಂದ.

"ಇನ್ನು ಕೆಲ ದಿನ ಉಳಿದಿದೆ ತಾನೆ? ಆ ಮೇಲೆ ನೀವು ತಪ್ಪು ಮಾಡಿರುವಿರೋ ಇಲ್ಲವೊ ಎಂಬುದನ್ನು ನಾನು ನಿಶ್ಚಯಿಸುವೆ."

"ಹಾಗೆಂದರೆ ....?"

"ನನ್ನ ಸಮ್ಮತಿಯಿಂದಾಗುವ ಮದುವೆ ಇದು, ಅದರ ಪೂರ್ಣ ಸ್ವಾತಂತ್ರ್ಯ ನನಗಿದೆ" ನನ್ನ ಮುಖವನ್ನೇ ನೋಡುತ್ತ ಆಲಿಸ್ ಹೇಳಿದಳು.

ಈ ಸ್ವಾತಂತ್ರ್ಯವಾದವನ್ನು ಹಿಂದೊಮ್ಮೆ ಆಲಿಸ್ ನನ್ನ ಮುಂದಿಟ್ಟಿದ್ದಳು. ಅದು ಆರೂವರೆ ವರುಷಗಳ ಹಿಂದೆ. ಆಲಿಸ್ ಮತ್ತು ನಾನು ಆಗ ಸಾಕಷ್ಟು ಪರಿಚಯವುಳ್ಳವರು. ನನ್ನಿಂದ ಆಗಾಗ್ಗೆ ಕತೆ ಪುಸ್ತಕ, ಪತ್ರಿಕೆಗಳನ್ನು ಅವಳು ಓದಲು ಪಡೆಯುತ್ತಿದ್ದಳು. ಒಂದು ದಿನ ಒಂದು ಪುಸ್ತಕದೊಳಗೆ ಚಿಕ್ಕದಾದ, ಮುದ್ದಾದ ಒಂದು ಸಣ್ಣ ತುಂಡು ಕಾಗದ ಇಟ್ಟಿದ್ದಳು. ಆ ಕಾಗದದಲ್ಲಿ ಬರೆದುದನ್ನೆಲ್ಲ ನಾನು ಓದಿದ್ದರೂ, ಏನೂ ಉತ್ತರ ಕೊಟ್ಟಿರಲಿಲ್ಲ. ಕೊನೆಗೆ ಅವಳಾಗಿಯೇ ನಾನೊಂದುದಿನ ಗುಡ್ಡೆಯಲ್ಲಿ ಅಲೆದಾಡುತಿದ್ದಾಗ ಕಾದು ನಿಂತು ನನ್ನೊಡನೆ ಕೇಳಿದ್ದಳು. ಅವಳ ಬೇಡಿಕೆಗಳು ಅಂದು ನನಗೆ ಸರ್ವಥಾ ಸಾಧ್ಯವಿರಲಿಲ್ಲ. ನನ್ನ ಕಾಲಮೇಲೆ ನಿಲ್ಲದೆಹುಳದಂತೆ ಜೀವಿಸುತ್ತಿರುವ ನನಗೆ ಅವೆಲ್ಲ ಹೇಳಿ ಸಿದ್ಧವಿಲ್ಲವೆಂದು ಅವಳಿಗೆ ಕಠಿಣವಾಗಿ ಉತ್ತರ ಕೊಟ್ಟಿದ್ದೆ. ಆ ಮೇಲೆ ಒಮ್ಮೆ ನಾನು ಮೋಟಾರಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಹಠಾತ್ತಾಗಿ ಅವಳಿಗೂ ನನ್ನೊಡನೆಯೇ, ನನಗೆ ತಾಗಿ ಕುಳಿತು ಪ್ರಯಾಣ ಮಾಡಬೇಕಾಯಿತು. ನಾನು ಅವಳೊಡನೆ ಅಂದು ಮಾತನಾಡಿಯೇ ಇರಲಿಲ್ಲ:

[illegible]

ಅದೇ.

– ಅವಳಣ್ಣ ನನ್ನ ಜಾದೀಕ ಗೆಳೆಯ

–ನಮ್ಮ ಜಾತಿಗಳು, [illegible] ರೀತಿ, ನೀತಿ, ಧಿಯಮಗಳು ಸರ್ವಥಾ ಬೇರೆ ಬೇರೆ.

– ನಾನು ಸ್ವತಂತ್ರ ಜೀವನ ನಡೆಸದಿರುವವ.

–ಅವಳೂ ಪರತಂತ್ರಳಾಗಿರುವವಳು.

..ಸಮಾಜದ ಕೋಟೆಲೆಗಳನ್ನು ಕಾಳುವ, ಕಾಳಿ ನಿಲ್ಲುವ ಶಕ್ತಿ ಇಬ್ಬರಲ್ಲೂ ಇಲ್ಲ!

ಜುವಾಂಪೀಂತನಿಗೂ ಆಲಿಸಳ ಇಚ್ಛೆ ಗೊತ್ತಾಗಿರದೇಕು. ಇಲ್ಲವಾದರೆ ಅವನು ಮತ್ತೆ ಮತ್ತೆ ಅಷ್ಟು ನಿಸ್ಸಂಕೋಚವಾಗಿ ತನ್ನ ಮನೆಯವರ ಸುದ್ದಿಗಳನ್ನು ನನ್ನೊಡನೆ ಚರ್ಚಿಸುತ್ತಿದ್ದಿಲ್ಲ. ಆದರೆ ನಾನು ಅವರಿಂದ ದೂರವಾಗಲು ಪ್ರಯತ್ನಿಸುತಿದ್ದ, ಏನು, ದೂರವಾಗಿಯೇ ಬಿಟ್ಟೆ.

ಈ ಆರು ವರುಷಗಳಲ್ಲಿ ಆಲಿಸಳನ್ನು ನಾನು ನೆನೆದುದು ಬರೇ ಕೆಲವು ಬಾರಿ, ಅದೂ ಚಲಚ್ಚಿತ್ರ ಮಂದಿರಗಳಲ್ಲಿ ಮತ್ತು ಕಾದಂಬರಿಗಳನ್ನೋದುವಾಗ. ಆದರೆ ಹಾಗೆಯೇ ಮರೆತೂ ಬಿಟ್ಟಿದ್ದೆ. ನನ್ನ ಜೀವನಕ್ರಮದ ಬದಲಾವಣೆಯೊಡನೆ ಮೌಲ್ಯಮಾಪಕವೂ ಬೇರಾಗುತಿತ್ತು. ಅದರ ಮೇಲೆ ಎಡೆಬಿಡದೆ ಅಂಟಿಕೊಂಡಿರುವ ಮಿತ್ರಗಣ. ಆಲಿಸ್ ಇನ್ನೂ ತನ್ನ ಹಟ ಬಿಟ್ಟಿಲ್ಲವೆಂದೂ ನನಗೆ ತಿಳಿಯಿತು.

"ನಾನು ಏನು ಮಾಡಬೇಕೆನ್ನುವೆ, ಈಗ?"

"ಈಗ ನಿಮ್ಮ ಕಾಲಿನಮೇಲೇ ನೀವು ನಿಂತಿದ್ದೀರಲ್ಲ?"

ಅದೊಂದು ವಿಚಿತ್ರ ಸಮಸ್ಯೆ ಆಲಿಸ್. "ನೀವು ತಯಾರಿಲ್ಲದವರು...."

ನಾನು ತಲೆ ಕೆಳಗೆ ಹಾಕಿದೆ. ಆ ಅಭಿಪ್ರಾಯವನ್ನು ಅವಳು ಪ್ರತ್ಯೇಕ ನನಗೆ ಹೇಳಬೇಕಾಗಿರಲಿಲ್ಲ. ನನ್ನ ಕುರಿತು ಎಷ್ಟೋ ಜನ ಹಾಗೆ ಹೇಳುವುದನ್ನು ಈ ಹಿಂದೆ ಕೇಳಿದ್ದೇನೆ.

"ನಿಮಗೆ ಮನಸ್ಸಿದ್ದರೆ, ಈಗಲೂ ನಿಮ್ಮನ್ನಾಶ್ರಯಿಸಲು ನಾನು ಸಿದ್ಧಳೇ. ಆರು ವರುಷಗಳಿಂದ ನೀವು ಎಲ್ಲೋ ಹೋಗಿ ಜೀವಿಸಿದಿರಿ. ನಾನೂ ನಿಮ್ಮೊಟ್ಟಿಗೆ ಬಂದರೆ ನನಗೂ ಹಾಗೆಯೇ ಜೀವಿಸಲಾಗದೆ? ನೀವು ದುಡಿಯುವಿರಾದರೆ ನಾನೂ ದುಡಿಯಬಲ್ಲೆ....."

"ಆಲಿಸ್! ನಿನ್ನ ಮದುವೆ ನಿಶ್ಚಯವಾದ ಮೇಲೆ ಹೀಗೆಲ್ಲಾ ನೀನು ಮಾತನಾಡುವುದು ಅಬದ್ಧ. ನಿನ್ನ ದಾರಿ ನೀನು ನೋಡಿಕೊಳ್ಳಬೇಕು..."

"ಓ! ನನ್ನ ಮದುವೆ ನಿಶ್ಚಯವಾದ ಮೇಲೆ ತಾನೇ ಊರಿಗೆ ಬರುವೆನೆಂದು ನೀವು ಪ್ರತಿಜ್ಞೆ ಹಾಕಿರಬೇಕು, ಸರಿ. ಈಗ ನನಗೆಲ್ಲ ತಿಳಿಯಿತು. ನಿಮ್ಮ ಮನಸ್ಸು ಬದಲಬಹುದೆಂದು ನಾನು ಎಣಿಸಿದ್ದೆಲ್ಲ ತಪ್ಪು, ಚಿಂತಿಲ್ಲ. ಆದದ್ದಾಗುವುದು"

(೧೦ನೆಯ ಪುಟಕ್ಕೆ)

# ಘಟಕಗಳ ಮೇಲೆ ಹಿರಿಯೋಲಗದ ಶಾಸನಾಧಿಕಾರ

## ಘಟನಾಸಮಿತಿಯ ಕಾರ್ಯಕಲಾಪಗಳು

## ಮೈಸೂರಿನ ವಿಲಯನದ ಬಗ್ಗೆ ಪ್ರತಿನಿಧಿ ಸಭೆಯಲ್ಲಿ ಗೊತ್ತುವಳಿ

### ಘಟನಾಸಮಿತಿಯ ಕಾರ್ಯಕಲಾಪ

ದೇಶದಲ್ಲಿಯ ಭೂಸಂಪತ್ತು, ಸಾಗರದ ತಳದಲ್ಲಿಯ ಬೆಲೆಯ ವಸ್ತುಗಳು ಹಿಂದುಸ್ತಾನ ಒಕ್ಕೂಟ ಸರಕಾರದ ಅಡಳಿತೆಗೊಳಪಟ್ಟು ಅದರ ಉಪಯೋಗಕ್ಕಾಗಿ ಇದೆ ಎಂಬ ಕಲಮನ್ನು ಘಟನಾಸಮಿತಿಯು ೧೫ ನೇ ತಾರೀಕಿನ ದಿನ ಸ್ವೀಕರಿಸಿತು. ಮುಂದೆ ಹಿಂದುಸ್ತಾನ ಒಕ್ಕೂಟದಲ್ಲಿ ಸೇರಬಹುದಾದ ಸಂಸ್ಥಾನವು ತನ್ನ ಅಧೀನದಲ್ಲಿದ್ದ ಸಮುದ್ರವು ತನ್ನ ಅಧೀನದಲ್ಲಿ ಇದೆಯೆಂದು ಸಾಧಿಸದಂತೆ ಈ ಕಲಮನ್ನು ತರಲಾಗಿದೆಯೆಂದು ಡಾ. ಅಂಬೇಡಕರರು ಹೇಳಿದರು. ೧೯೩೫ ರ ಕಾಯದೆಯು ಹಿಂದುಸ್ತಾನದ ಪ್ರಜಾಪ್ರಭುತ್ವ ಘಟನೆಯನ್ನು ಮಾಡಲಾಗಿರುವದರಿಂದ ಹಿಂದುಸ್ತಾನದ ವಸಾಹತು ಪ್ರಾಂತಗಳ ಸಾಲಮೂಲ ಹೊಣೆ ಹಕ್ಕುಗಳ ವಾರಸಾ ಹಕ್ಕುಗಳನ್ನು ತಳೆಯುವ ಇನ್ನೊಂದು ಕಲಮನ್ನು ಘಟನಾಸಮಿತಿಯು ಸ್ವೀಕರಿಸಿತು. ಚುನಾವಣೆಯ ನಿಯಂತ್ರಣ ಮುಂತಾದ ಅಧಿಕಾರವು ಅಧ್ಯಕ್ಷರಿಂದ ನೇಮಕವಾಗುವ ಚುನಾವಣೆಯ ಸಮಿತಿಗೆ ಇರಬೇಕೆಂಬ ಉಪಕಲಮೊಂದನ್ನು ಸ್ವೀಕರಿಸಲಾಯಿತು.

ಕೆಳಕೋರ್ಟಿನವರು ನಿರಪರಾಧಿ ಎಂದು ಬಿಡುಗಡೆ ಮಾಡಿದ್ದ ಫೌಜದಾರೀ ಖಟ್ಲೆಯಲ್ಲಿ ಹಾಯಕೋರ್ಟಿನ ಮುಂದೆ ಅಪೀಲು ಬಂದಾಗ ಹಾಯಕೋರ್ಟಿನವರು ಮರಣ ದಂಡನೆ ವಿಧಿಸಿದರೆ ವರಿಷ್ಠ ನ್ಯಾಯಾಲಯಕ್ಕೆ ಹಾಯಕೋರ್ಟಿನ ಈ ತೀರ್ಪಿನ ವಿರುದ್ಧ ಅಪೀಲು ಸ್ವೀಕರಿಸಲು ಕೆಳಕೋರ್ಟಿನಲ್ಲಿ ನಡೆದ ಖಟ್ಲೆಯನ್ನು ಹಾಯಕೋರ್ಟು ತನ್ನ ಕಡೆಗೆ ವರ್ಗಾಯಿಸಿಕೊಂಡು ಅದರಲ್ಲಿ ಮರಣ ದಂಡನೆಯ ತೀರ್ಪು ಕೊಟ್ಟರೆ ಅಂಥ ತೀರ್ಪಿನ ಮೇಲೆಯೂ ವರಿಷ್ಠ ನ್ಯಾಯಾಲಯಕ್ಕೆ ಅಪೀಲು ಸ್ವೀಕರಿಸಲು ಅಧಿಕಾರವಿದೆ ಎಂಬ ಕಲಮು ೧೪ ನೇ ತಾರೀಕಿನ ದಿವಸ ಸ್ವೀಕೃತವಾಯಿತು.

ಅವಶ್ಯವೆನಿಸಿದರೆ ಶಾಸನಸಭೆ ಸೇರದಿರುವ ಕಾಲದಲ್ಲಿ ಸುಗ್ರೀವಾಜ್ಞೆಯನ್ನು ಹೊರಡಿಸಲು ಗವರ್ನರರಿಗೆ ಅಧಿಕಾರವಿದೆ. ಗವರ್ನರರು ಹೊರಡಿಸಿದ ಸುಗ್ರೀವಾಜ್ಞೆಯು ಶಾಸನಸಭೆಯ ಅಧಿವೇಶನ ಸೇರಿದ ಅನಂತರ ಆರು ವಾರಗಳ ವರೆಗೆ ಅಥವಾ ಶಾಸನಸಭೆಯು ಈ ಸುಗ್ರೀವಾಜ್ಞೆಯು ರದ್ದಾಗಬೇಕೆಂದು ಆರು ವಾರಗಳ ಅವಧಿಗಿಂತ ಮುಂಚಿತವಾಗಿಯೆ ಗೊತ್ತುವಳಿ ಸ್ವೀಕರಿಸಿದರೆ ಅದು ಸ್ವೀಕೃತವಾದ ದಿನದ ವರೆಗೆ ಜಾರಿಯಲ್ಲಿ ಇರುವದು. ಶಾಸನಸಭೆಯ ಸದಸ್ಯರು ಮತದಾನ ಮಾಡಲು ೧೬೭ ನೇ ಕಲಮಿನಲ್ಲಿ ಹೇಳಿದ ಯಾವದೇ ಅನರ್ಹತೆಗೆ ಗುರಿಯಾಗಿದ್ದರೆ ಅವನು ಅನರ್ಹನೆಂದೂ ಅವನ ಸ್ಥಳವು ಖಾಲಿಯಾಗಿದೆಯೆಂದೂ ಸಾರುವ ಅಧಿಕಾರವು ಗವರ್ನರರಿಗೆ ಇದೆ ಎಂಬ ಹೊಸ ಕಲಮನ್ನು ಸೇರಿಸಲು ಶ್ರೀ ವಿ. ಟಿ. ಕೃಷ್ಣಮಾಚಾರಿಯವರು ಮಂಡಿಸಿದ ತಿದ್ದುಪಡಿ ಸ್ವೀಕೃತವಾಯಿತು.

ರಾಷ್ಟ್ರಹಿತದ ದೃಷ್ಟಿಯಿಂದ ಒಕ್ಕೂಟದ ಘಟಕಗಳ ವಿಷಯಗಳ ಬಗೆಗೂ ಹಿರಿಯೋಲಗಕ್ಕೆ ಕಾಯದೆಮಾಡುವ ಅಧಿಕಾರ ಕೊಡುವ ಕಲಮನ್ನು ಘಟನಾಸಮಿತಿಯಲ್ಲಿ ಸ್ವೀಕರಿಸಲಾಯಿತು. ಹೆಚ್ಚಿನ ನ್ಯಾಯಾಲಯಗಳನ್ನು ಸ್ಥಾಪಿಸುವ ಅಧಿಕಾರವನ್ನೂ ಹಿರಿಯೋಲಗಕ್ಕೆ ಕೊಡುವ ೨೧೯ ನೇ ಕಲಮನ್ನು ಘಟನಾಸಮಿತಿಯು ಸ್ವೀಕರಿಸಿತು. ಅದೇ ರೀತಿ ಹಾಯಕೋರ್ಟುಗಳ ಘಟನೆ, ಸಂಸ್ಥಾಪನೆ, ಅಧಿಕಾರ ಕ್ಷೇತ್ರ ಅವುಗಳ ಕಾರ್ಯವಿಧಾನದ ಬಗ್ಗೆ ಮಾರ್ಗದರ್ಶನ ಮಾಡುವದಕ್ಕೆ ಸಂಬಂಧಿಸಿದ ಕಾಯದೆಗಳನ್ನು ಮಾಡಲು ಹಿರಿಯೋಲಗಕ್ಕೆ ಅಧಿಕಾರ ಕೊಡುವ ೨೨೦–೨೨೧–೨೨೨ ಕಲಮುಗಳನ್ನು ಈ ಸಭೆಯು ರದ್ದುಗೊಳಿಸಿತು. ಅವಶಿಷ್ಟ ಶಾಸನದ ಅಧಿಕಾರವನ್ನು ಹಿರಿಯೋಲಗಕ್ಕೆ ಕೊಡುವ ೨೨೩ ನೇ ಕಲಮನ್ನು ಸ್ವೀಕರಿಸಲಾಯಿತು. ಹಿಂದೀ ಸಂಸ್ಥಾನಗಳ ಬಗ್ಗೆ ಕಾಯದೆ ಮಾಡುವ ಅಧಿಕಾರವನ್ನು ಹಿರಿಯೋಲಗಕ್ಕೆ ಕೊಡುವ ೨೨೪ ೨೨೫ ಕಲಮುಗಳನ್ನು ಕೆಲ ಸದಸ್ಯರ ಸೂಚನೆಯ ಮೇರೆಗೆ ತಡೆಹಿಡಿಯಲಾಯಿತು. ಮೇಲ್ಮನೆಯ ಶಾಸರಿಷ್ಟ ಸದಸ್ಯರ ಬೆಂಬಲದಿಂದ ಸ್ವೀಕರಿಸಿ ರಾಷ್ಟ್ರಹಿತದೃಷ್ಟಿಯಿಂದ ಹಿರಿಯೋಲಗವು ಕಾಯದೆ ಮಾಡಬೇಕೆಂದು ಸೂಚಿಸಿದರೆ ಗೊತ್ತುವಳಿಯಲ್ಲಿ ಸೂಚಿಸಲಾದ ವಿಷಯಗಳ ಬಗ್ಗೆ ಒಕ್ಕೂಟ ಅದರ ಭಾಗಕ್ಕೆ ಕಾಯದೆ ಮಾಡುವದು ಶಾಸನಬದ್ಧವಾದುದು ಎಂಬ ೨೨೬ ನೆಯ ಕಲ್ಮಿನ ಬಗ್ಗೆ ವಿಶೇಷ ಚರ್ಚೆಯಾಯಿತು. ಈ ಗೊತ್ತುವಳಿಯ ಒಂದು ವರುಷಕ್ಕೆ ಮೀರದ ಅವಧಿಯ ವರೆಗೆ ಜಾರಿಯಲ್ಲಿ ಇರಬೇಕು. ಇದರ ಆಧಾರದ ಮೇಲೆ ಮಾಡಲಾದ ಕಾಯದೆಯು ಗೊತ್ತುವಳಿಯ ಅವಧಿಯ ಮುಕ್ತಾಯದ ಅನಂತರ ಆರು ತಿಂಗಳು ಆದ ಮೇಲೆ ರದ್ದಾಗುವದು ಎಂಬ ಡಾ. ಅಂಬೇಡಕರರ ತಿದ್ದುಪಡಿಯೊಂದಿಗೆ ಸ್ವೀಕೃತವಾಯಿತು. ಕೇಂದ್ರ ಮತ್ತು ಪ್ರಾಂತಗಳಲ್ಲಿಯ ಸಂಬಂಧದ ಬಗೆಗಿದ್ದ ಕಲಮುಗಳನ್ನೂ ಘಟನಾ ಸಮಿತಿಯು ಸ್ವೀಕರಿಸಿತು. ಅಂತರ್ ಪ್ರಾಂತೀಯ ವ್ಯಾಪಾರ ವಾಣಿಜ್ಯಗಳಿಗೆ ಸಂಬಂಧಿಸಿದ ಕಲಮುಗಳ ಚರ್ಚೆಯನ್ನು ತಡೆಹಿಡಿಯಲಾಯಿತು.

ಇನ್ನೂ ಹಲವು ಕಲಮುಗಳ ಚರ್ಚೆ ಮುಗಿಸಿ ಘಟನಾ ಸಮಿತಿಯು ೧೬ ಕ್ಕೆ ಮುಂಬರಿಯಿತು. ಐದು ವಾರಗಳ ಅನಂತರ ಅದು ಮತ್ತೆ ಕೂಡುವದು.

### ಪ್ರಾಂತೀಯ ಕಾಂಗ್ರೆಸ್ಸಿನ ಸ್ಥಾನಮಾನ

ಪ್ರಾಂತೀಯ ಕಾಂಗ್ರೆಸ್ಸು ಮತ್ತು ಶಾಸನ ಸಭೆ ಹಾಗು ಮಂತ್ರಿಮಂಡಲಗಳಲ್ಲಿಯ ಸಂಬಂಧವನ್ನು ಕುರಿತು ಸರದಾರ ವಲ್ಲಭಭಾಯಿ ಪಟೇಲರು ಕೆಲ ಮಾತುಗಳನ್ನು ಹೇಳಿರುವರು. ರಾಜಸ್ತಾನ ಪ್ರಾಂತೀಯ ಕಾಂಗ್ರೆಸ ಸಮಿತಿಯ ಅಧ್ಯಕ್ಷರಿಗೆ ಕಳಿಸಿದ ತಂತಿಯಲ್ಲಿ ಸರದಾರರು ಈ ವಿಷಯವನ್ನು ಸ್ಪಷ್ಟೀಕರಿಸಿರುವರು. ರಾಜಸ್ತಾನ ಒಕ್ಕೂಟದಲ್ಲಿ ನಿಯುಕ್ತ ಶಾಸನ ಸಭೆಯಿಲ್ಲದಿರುವದರಿಂದ ಅಲ್ಲಿಯ ಮುಖ್ಯಮಂತ್ರಿ ಹಾಗೂ ಮಂತ್ರಿಮಂಡಲವು ಸಂಸ್ಥಾನ ಶಾಖೆಗೆ ಹೊಣೆಗಾರವಾಗುವದಲ್ಲದೆ ಪ್ರಾಂತೀಯ ಕಾಂಗ್ರೆಸ್ಸಿಗೆ ಅಲ್ಲ ಎಂದು ಅವರು ರಾಜಸ್ತಾನ ಪ್ರಾಂತೀಯ ಕಾಂಗ್ರೆಸ ಅಧ್ಯಕ್ಷರಾದ ಶ್ರೀ ವ್ಯಾಸರಿಗೆ ತಿಳಿಸಿರುವರು. ರಾಜಸ್ತಾನದ ಮುಖ್ಯ ಮಂತ್ರಿ ಹಿರಾಲಾಲ್ ಶಾಸ್ತ್ರಿಗಳು ಪ್ರಾಂತೀಯ ಕಾಂಗ್ರೆಸ್ಸಿಗೆ ಹೊಣೆಗಾರರಾಗಲಾರರು, ಪ್ರಾಂತೀಯ ಕಾಂಗ್ರೆಸ್ಸು ಶಾಸನಸಭೆಯಂತೆ ನಡೆದುಕೊಳ್ಳಲಾರದು. ಪ್ರಾಂತೀಯ ಕಾಂಗ್ರೆಸ್ಸಿನ ಧುರೀಣರೆಂದು ಅವರಿಂದು ಮುಖ್ಯ ಮಂತ್ರಿಗಳಾಗಿಲ್ಲ, ನಿಮ್ಮೆಲ್ಲರ ಒಮ್ಮತದ ಬೇಡಿಕೆ ಬಂದದ್ದರಿಂದ ಅವರನ್ನು ನಾನು ನೇಮಿಸಿದ್ದರಿಂದ ಸಂಸ್ಥಾನ ಶಾಖೆಗೇ ಅವರು ಹೊಣೆಗಾರರೆಂಬುದನ್ನು ಸರದಾರರು ಸ್ಪಷ್ಟಪಡಿಸಿರುವರು. ಈ ಬಗೆಯ ನಿಮ್ಮ ಧೋರಣೆಯಿಂದ ನಿಮಗೆ ಹಾನಿಯಲ್ಲದೆ ನಮ್ಮ ಸಂಸ್ಥೆಗೇ ಅಗೌರವವಾಗಿದೆಯೆಂದು ಸರದಾರರು ತಿಳಿಸಿರುವರು. ಶ್ರೀವ್ಯಾಸರು ಈರೀತಿಯಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವರು. ಪ್ರಾಂತೀಯ ಕಾಂಗ್ರೆಸ ಸಮಿತಿಯ ವಿಶೇಷ ಅಧಿವೇಶನವು ಗೋಕುಲಭಾಯಿಭಟ್ಟರ ರಾಜೀನಾಮೆಯನ್ನು ಸ್ವೀಕರಿಸಿ ನನ್ನನ್ನು ಅಧ್ಯಕ್ಷ ಎಂದು ಆರಿಸಿದ್ದಲ್ಲದೆ ಹಿರಾಲಾಲ ಶಾಸ್ತ್ರಿ ಮತ್ತು ಕಾಂಗ್ರೆಸ ಮಂತ್ರಿಗಳು ರಾಜೀನಾಮೆ ಕೊಡಬೇಕೆಂದೂ ನಿರ್ಣಯಿಸಿತು. ಈ ಗೊತ್ತುವಳಿಗೆ ೮೮ ಅನುಕೂಲ ಮತಗಳು ಮತ್ತು ಒಂದು ಪ್ರತಿಕೂಲ ಮತ ಬಿದ್ದಿವೆ. ಕೆಲವರು ತಟಸ್ಥ ಉಳಿದಿರುವರು. ಈ ಗೊತ್ತುವಳಿಯ ಚರ್ಚೆ ನಡೆದಾಗ ಗೋಕುಲಭಾಯಿ ಭಟ್ಟ ಮತ್ತು ಅವರ ಗೆಳೆಯರು ಸಭೆಯಿಂದ ಎದ್ದು ಹೋದರು ಎಂದು ಮುಂತಾಗಿಯು ಅವರು ಬರೆದಿರುವರು. ರಜಪುತಾನದ ಮುಖ್ಯ ಮಂತ್ರಿಗಳಾದ ಡಾ. ಹಿರಾಲಾಲ ಶಾಸ್ತ್ರಿಗಳು ಪ್ರಕಟನೆಯೊಂದನ್ನು ಹೊರಡಿಸಿ ಪಟೇಲರ ಸಲಹೆಯ ಮೇರೆಗೆ ತಾವು ಅಧಿಕಾರದಲ್ಲಿ ಉಳಿಯುವುದಾಗಿ ಸಾರಿದ್ದಾರೆ. ಕಾಂಗ್ರೆಸ್ಸಿನಲ್ಲಿ ಎಲ್ಲರಂತೆ ನನಗೂ ಪ್ರೇಮವಿದೆ ಅದರಾಭಿಮಾನಗಳು ಇವೆ. ಮುಖ್ಯ ಮಂತ್ರಿಪದವನ್ನು ಬಿಟ್ಟುಗೊಡಲು ನಾನು ಸಿದ್ಧನಿಲ್ಲ. ಅಧಿಕಾರ ಲಾಲಸೆಯಿಂದ ನಾನು ಹೀಗೆ ಹೇಳುವದಿಲ್ಲ. ಆದರೆ ರಾಜೀನಾಮೆ ಕೊಡಲು ನಾನು ಸ್ವತಂತ್ರ ಇಲ್ಲ. ಅಧಿಕಾರ ವಹಿಸಿದ ಅನಂತರ ನಾನು ರಾಜಸ್ಥಾನದಲ್ಲೆಲ್ಲ ಸಂಚರಿಸಿ ಬಂದಿರುವೆನು. ನನ್ನ ಮಂತ್ರಿಮಂಡಳಕ್ಕೆ ಎಲ್ಲೆಲ್ಲಿಯೂ ಬೆಂಬಲ ದೊರಕಿದೆ. ಆದುದರಿಂದ ನಾನು ಕೈಲಾದಷ್ಟು ಪ್ರಜಾಸೇವೆ ಮಾಡುವೆನು ಎಂದು ಮುಂತಾಗಿ ಅಭಿಪ್ರಾಯಪಟ್ಟಿರುವರು. ಅಂತೂ ರಾಜಸ್ತಾನದಲ್ಲಿ ಒಂದು ಬಗೆಯಿಂದ ತಿಕ್ಕಾಟ ನಡೆದಂತಾಗಿದೆ.

### ಮೈಸೂರು ಮತ್ತು ಕರ್ನಾಟಕ

ಭಾವೀ ಕರ್ನಾಟಕ ಪ್ರಾಂತದಲ್ಲಿ ಮೈಸೂರು ವಿಲಯನ ಹೊಂದುವ ಅಥವಾ ಇತರ ರೀತಿಯಲ್ಲಿ ಸೇರುವ ಬಗ್ಗೆ ಮೈಸೂರಿನ ರಾಜಕಾರಣಿಗಳು ತಳೆದಿರುವ ಭಾವನೆ ಕಳೆದವಾರ ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ನಡೆದ ಸಂಗತಿಗಳಿಂದ ಸ್ಫುಟವಾಯಿತು. ಈ ಪ್ರಶ್ನೆಯನ್ನು ಮೊದಲು ಶುಕ್ರವಾರ ತಾ. ೧೦ ಕ್ಕೆ ಸಭೆಯಲ್ಲಿ ಸದಸ್ಯ ಶ್ರೀ ಎಸ್. ಶಿವಪ್ಪನವರು ಪ್ರಶ್ನೋತ್ತರ ಕಾಲದಲ್ಲಿ ಎತ್ತಿದರು. ಸಂಸ್ಥಾನವು ಅಖಂಡ ಕರ್ನಾಟಕದಲ್ಲಿ ಲೀನಹೊಂದಬೇಕೇ ಬೇಡವೇ ಎಂಬ ಬಗ್ಗೆ ಸಾರ್ವತ್ರಿಕ ಮತಗಣನೆಯನ್ನು ಏರ್ಪಡಿಸಲು ಸರಕಾರವು ಯೋಚಿಸಿದೆಯೇ ಮತ್ತು ಯೋಚಿಸಿದ್ದರೆ ಯಾವಾಗ, ಯಾವ ರೀತಿಯಲ್ಲಿ ಅದನ್ನು ಏರ್ಪಡಿಸಲಾಗುವದು? ಎಂದು ಅವರು ಕೇಳಿದಾಗ ಮುಖ್ಯ ಮಂತ್ರಿ ಶ್ರೀ ಕೆ. ಸಿ. ರೆಡ್ಡಿಯವರು ಒಳ್ಳೆ ಜಾಣಾಕ್ಷತನದಿಂದ ನುಣುಚಿಕೊಳ್ಳುವ ಉತ್ತರಕೊಟ್ಟು ಆ ರೀತಿ ಈ ವರೆಗೆ ಯಾವುದೇ ಯೋಚನೆ ಮಾಡಿಲ್ಲವೆಂದೂ ಅದ್ದರಿಂದಅದನ್ನು ಯಾವಾಗ ಯಾವ ರೀತಿಯಲ್ಲಿ ಏರ್ಪಡಿಸಲಾಗುವದೆಂಬ ಪ್ರಶ್ನೆಯೇ ಏಳುವದಿಲ್ಲೆಂದೂ ಹೇಳಿದರು. ಅನೇಕ ಉಪಪ್ರಶ್ನೆಗಳಿಗೆ ಅವರು ಕೊಟ್ಟ ಉತ್ತರದಿಂದ ಜನಾಭಿಪ್ರಾಯ ಪಡೆದೇ ಇಂಥ ಪ್ರಶ್ನೆಗಳ ತೀರ್ಮಾನವಾಗಬೇಕೆಂಬುದು ಸರಕಾರದ ಗಮನಕ್ಕೆ ಬಂದಿದೆ" ಯೆಂದಲ್ಲದೆ ಅದಕ್ಕೂ ಹೆಚ್ಚಿನ ಮಾತು ಮಂತ್ರಿಗಳಿಂದ ಹೊರಡಲಿಲ್ಲ. ವಿಲಯನಕ್ಕೆ ಅನುಕೂಲ ಮತ್ತು ಪ್ರತಿಕೂಲ ಚಳವಳಿ ನಡೆದಿರುವದು ಸರಕಾರದ ಗಮನಕ್ಕೆ ಬಂದಿರುವದೆಂದು ಮಾತ್ರ ಅವರು ಒಪ್ಪಿದರು. ಆದರೆ ಆಸಕ್ತ ಸದಸ್ಯರು ಈ ಪ್ರಶ್ನೆಯನ್ನು ಅಲ್ಲಿಗೇ ಬಿಡುವಂತೆ ಕಾಣಲಿಲ್ಲ. ಅಂತೆಯೇ ತಾ. ೧೫ ಕ್ಕೆ ಹಿಂದು ಮಹಾಸಭೆಯ ಶ್ರೀ ಭೂಪಾಲಂ ಚಂದ್ರಶೇಖರಯ್ಯನವರು ಮೈಸೂರಿನ ಭವಿತವ್ಯನಿರ್ಣಯವು ಜನಮತಗಣನೆಯ ಮೂಲಕವೇ ಆಗತಕ್ಕದೆಂಬ ಆಶಯದ ಗೊತ್ತುವಳಿಯನ್ನು ಸಭೆಯ ಮುಂದೆ ತಂದರು. ಗೊತ್ತುವಳಿಯನ್ನು ಬರಿ ಚರ್ಚಿಸಬೇಕಲ್ಲದೆ ಮತಗಣನೆ ಮಾಡಬಾರದೆಂದು ಅಧ್ಯಕ್ಷರು ಸೂಚಿಸಿದ ಪ್ರಕಾರ ಮತಗಣನೆಯಾಗದಿದ್ದರೂ ಮೈಸೂರು ಕರ್ನಾಟಕ ಪ್ರಾಂತದಲ್ಲಿ ಸಮಾವೇಶ ಹೊಂದುವ ವಿಷಯದಲ್ಲಿ ಸದಸ್ಯರಲ್ಲಿದ್ದ ಸಾರ್ವತ್ರಿಕ ವಿರೋಧಾಭಿಪ್ರಾಯ ಚರ್ಚಾಕಾಲದಲ್ಲಿ ಬೆಳಕಿಗೆ ಬಂತು. ಶ್ರೀ ಭೂಪಾಲಂ ಅವರು ತಮ್ಮ ಭಾಷಣದಲ್ಲಿ ಮತಗಣನೆಯಿಲ್ಲದೆ ಮೈಸೂರು ಕರ್ನಾಟಕದಲ್ಲಿ ಲೀನವಾಗಬಾರದಷ್ಟೇ ಅಲ್ಲ, ಉಳಿದ ಕರ್ನಾಟಕವು ಮೈಸೂರಲ್ಲಿ ಸೇರತಕ್ಕದ್ದಲ್ಲವೆಂದೂ ಸ್ಪಷ್ಟಗೊಳಿಸಿದರು. ಆದರೆ ಕೊಡಗಿನಂಥ "ಸಣ್ಣ" ಪ್ರದೇಶಗಳು ಮತಗಣನೆಯಿಲ್ಲದೆ ಮೈಸೂರಲ್ಲಿ ಸೇರಲು ಅವರದೇನೂ ಆತಂಕವಿರಲಿಲ್ಲ! ಹಿಂದು ಸಭಾವಾದಿಗಳಾದ ಭೂಪಾಲಂ ಅವರ ಈ ಗೊತ್ತುವಳಿ ವಿಚಿತ್ರವಲ್ಲದಿದ್ದರೂ ಅವರ ಪ್ರತಿಪಕ್ಷಿಗಳ ಅದರಲ್ಲಿಯೂ ಹಿಂದಿನ ಮುಸ್ಲಿಂಲೀಗ್ ಪಕ್ಷದ ಶ್ರೀ ಖಲೀಲರು ಅದಕ್ಕೆ ಬೆಂಬಲವಿತ್ತದ್ದು ಗಮನಾರ್ಹವಾಗಿದೆ. ಶ್ರೀ ಎಂ. ರಾಮಸ್ವಾಮಿಯವರಂತೂ ಶಾಸನಬದ್ಧವಾಗಿರುವ ಶ್ರೀಮನ್ ಮಹಾರಾಜರ ಆಡಳಿತೆಯ ಕುರಿತು ಜನಮತಕೇಳುವದೇ ಅಪ್ರಕೃತವೆಂದು ಗೊತ್ತುವಳಿಯನ್ನು ವಿರೋಧಿಸಿದರು. ಕೊನೆಗೆ ಮುಖ್ಯಮಂತ್ರಿ ಶ್ರೀ ಚೆಂಗಲರಾಯರೆಡ್ಡಿಯವರು ಶ್ರೀ ಭೂಪಾಲಂ ಅವರು ಅಪೇಕ್ಷಿಸಿದ ಆಶ್ವಾಸನವನ್ನು ಕೊಡುತ್ತ ಜನಮತಗಣನೆಯುಲ್ಲದೆ ಮೈಸೂರಿನ ಭವಿತವ್ಯವನ್ನು ನಿರ್ಣಯಿಸುವದಿಲ್ಲೆಂದು ಸರಕಾರದ ಪರವಾಗಿ ತಿಳಿಸಿ ಹೃದಯವನ್ನು ಹಗುರುಮಾಡಿಕೊಂಡರು. ಮಹಾರಾಜರೂ ಜನಾಭಿಪ್ರಾಯದಂತೆ ನಡೆದುಕೊಳ್ಳಬಯಸುತ್ತಾರೆಂದೂ ಅವರು ಹೇಳಿದರು. ಆದರೆ ಜನಾಭಿಪ್ರಾಯವನ್ನು ಗೊತ್ತುಮಾಡಿಕೊಳ್ಳುವ ಕ್ರಮದ ಬಗ್ಗೆ ಮಾತ್ರ ಅವರು ಅನಿರ್ಧಾರವನ್ನೇ ವ್ಯಕ್ತಗೊಳಿಸಿದರು. ಅದಕ್ಕಾಗಿ ಪ್ರತ್ಯಕ್ಷ ಮತದಾನವಾಗಬೇಕೆ? ಅಥವಾ ಈ ಪ್ರಶ್ನೆಯ ಮೇಲೆ ನಡೆದ ಚುನಾವಣೆಯಲ್ಲಿ ಆರಿಸಿಬಂದ ಪ್ರತಿನಿಧಿಗಳ ಅಭಿಪ್ರಾಯ ಪಡೆದರೆ ಸಾಕೆ? ಎಂಬುದು ತೊಡಕಿನದಾಗಿದೆಯೆಂದು ಅವರು ಹೇಳಿದರು. ಏನಾದರೂ ಅಖಂಡ ಕರ್ನಾಟಕ ನಿರ್ಮಾಣದ ವಿಷಯದಲ್ಲಿ ಜನಮತಗಣನೆಯ ನೆವದಿಂದ ಪ್ರತಿಬಂಧವನ್ನಲ್ಲದಿದ್ದರೂ ವಿಲಂಬವನ್ನು ಉಂಟುಮಾಡಲು ಮೈಸೂರಿನ ಮುಂದಾಳುಗಳು ಯಥಾಶಕ್ತಿ ಪ್ರಯತ್ನ ಮಾಡುವರೆಂದು ಕರ್ನಾಟಕ ಪ್ರಾಂತಾಭಿಮಾನಿಗಳು ತಿಳಿದುಕೊಳ್ಳಬಹುದು.

---

### ವಿಜಾಪುರ ಜಿಲ್ಹೆಯಲ್ಲಿ ಯಾತ ನೀರಾವರಿ

#### ಹಲವು ಯೋಜನೆಗಳ ಪ್ರಾರಂಭ

ಮುಂಬಯಿ ಒಕ್ಕಲುತನ ಮಂತ್ರಿಗಳಾದ ಪಾಟೀಲ ಮಲ್ಲನಗೌಡರು ವಿಜಾಪುರದಲ್ಲಿ ಕಳೆದ ವಾರ ಕೂಡಿದ ಆಹಾರ ಪರಿಷತ್ತಿನಲ್ಲಿ ದೇಶದ ಆಹಾರ ಬಿಕ್ಕಟ್ಟನ್ನು ನಿವಾರಿಸಲು ಜನತೆಯ ಮತ್ತು ರೈತರ ಸಹಕಾರವನ್ನು ಕೋರಿ ಒಕ್ಕಲುತನವನ್ನು ಸಂಘಟಿಸಬೇಕೆಂದು ಕೇಳಿಕೊಂಡರು. ಸ್ವಾಭಾವಿಕವಾಗಿ ಸಮೃದ್ಧವಾಗಿದ್ದರೂ ಆಗಾಗ ಬರಗಾಲದ ಪೀಡೆಗೊಳಗಾಗುವ ವಿಜಾಪುರ ಜಿಲ್ಲೆಯನ್ನು ಈ ಪರಿಯಿಂದ ತಪ್ಪಿಸಲು ಯಾತ ನೀರಾವರಿ ಯೋಜನೆಗಳು ಮಾತ್ರ ಉಪಯುಕ್ತವಾಗಿದ್ದು ಅವುಗಳನ್ನು ಅಲ್ಲಲ್ಲಿ ಕೈಕೊಳ್ಳಲಾಗಿದೆ. ಈಗಾಗಲೆ ಕೊರ್ತಿ ಮತ್ತು ಶಿವಯೋಗ ಮಂದಿರದಲ್ಲಿ ಇಂಥ ಎರಡು ಯೋಜನೆಗಳು ಪೂರ್ತಿಯಾಗಿವೆ. ಹಿಂಗಾರಿ ಹಂಗಾಮಿನೊಳಗೆ ಹವೇಲಿ, ಅನಗವಾಡಿ, ದೊಡ್ಡಿಹಾಳ, ರೊಳ್ಳಿ ಹಾಗು ಬಳೂತಿ ಈ ೫ ಸ್ಥಳಗಳಲ್ಲಿ ಯಾತ ನೀರಾವರಿ ಯೋಜನೆಗಳನ್ನು ಪೂರ್ತಿಗೊಳಿಸಲಾಗುವದಲ್ಲದೆ ಯಾತ ನೀರಾವರಿ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಂಡು ಯೋಜನೆಗಳನ್ನು ಕೈಕೊಳ್ಳುವದಾದರೆ ರೈತರಿಗೆ ವೆಚ್ಚದ ಅರ್ಧವನ್ನು ಸರಕಾರದಿಂದ ಕೊಡಲಾಗುವದೆಂದೂ ಅವರು ಸಾರಿದರು. ಮಾನ್ಯ ಮಂತ್ರಿಗಳು ಈ ಯೋಜನೆಗಳು ನಡೆದಿರುವ ಸ್ಥಳಗಳಿಗೂ ಭೆಟ್ಟಿಕೊಟ್ಟರು.

ಈಗಾಗಲೆ ಪೂರ್ತಿಯಾಗಿರುವ ಕೊರ್ತಿ ಮತ್ತು ಶಿವಯೋಗಮಂದಿರ ಯೋಜನೆಗಳಿಗೆ ೪ ಲಕ್ಷ ರೂಪಾಯಿ ವೆಚ್ಚ ಬಂದಿದೆ. ಅದು ೨೨೦೦ ಎಕರೆ ಭೂಮಿಗೆ ನೀರುಣಿಸುವದು.

ಬಾಗಿಲುಕೋಟೆಯಿಂದ ೩ ಮೈಲು ದೂರದಲ್ಲಿರುವ ಹವೇಲಿಯ ಯೋಜನೆಗೆ ೧೨೦ ಸಾವಿರ ರೂಪಾಯಿ ವೆಚ್ಚ ಬಂದು ೨೪೬೦ ಎಕರೆ ಭೂಮಿಗೆ ನೀರು ಸಿಗುವದು. ಬಾಗಿಲುಕೋಟೆಯಿಂದ ೧೧ ಮೈಲಿಯ ಮೇಲಿರುವ ಅನಗವಾಡಿ ಯೋಜನೆಯು ೭೫ ಸಾವಿರ ರೂ. ವೆಚ್ಚದಿಂದ ೯೦೦ ಎಕರೆಗೆ ನೀರು ದೊರಕಿಸುವದು. ಇವೆರಡೂ ಘಟಪ್ರಭಾನದಿಯ ಮೇಲೂ ರೊಳ್ಳಿ, ದೊಡ್ಡಿಹಾಳ ಹಾಗು ಬಳೂತಿ ಯೋಜನೆಗಳು ಕೃಷ್ಣಾತೀರದಲ್ಲೂ ಇರುವವು. ಅವಕ್ಕೆ ಅನುಕ್ರಮವಾಗಿ ೩॥ ಲಕ್ಷ, ೫ ಲಕ್ಷ ಮತ್ತು ೩॥ ಲಕ್ಷ ರೂ. ವೆಚ್ಚ ಮತ್ತು ಅವುಗಳಿಂದ ೧೨೦೦, ೨೩೦೦ ಮತ್ತು ೧೬೦೦ ಎಕರೆ ಭೂಮಿಗೆ ನೀರೂ ಆಗುವದು.

ಇದಲ್ಲದೆ ಅಸಗಿಯಲ್ಲಿ ನಡೆದ ನೀರಾವರಿ ಕೆರೆಯಲ್ಲಿ ೫೦೦ ಲಕ್ಷ ಘನಅಡಿ ನೀರು ಸಂಗ್ರಹಿಸಿ ೩೫೦ ಲಕ್ಷ ಘನಅಡಿ ನೀರನ್ನು ನೀರಾವರಿಗೆ ಒದಗಿಸುವ ವ್ಯವಸ್ಥೆಯಿದೆ. ದೂದಿಹಾಳದಲ್ಲಿ ೧೫ ಅಡಿ ಎತ್ತರ ೩೦೦ ಅಡಿ ಉದ್ದದ ಒಂದು ಚಿಕ್ಕ ಒಡ್ಡು ಕಟ್ಟಲ್ಪಡುತ್ತಿದೆ.

---

### ಶ್ರೀ ಗುರುರಾವ ದೇಸಾಯರಿಗೆ ಯಶ

ಮುಂಬಯಿ ವಿಧಿ ಮಂಡಲದ ಸದಸ್ಯರಾದ ಶ್ರೀ ನರಸಿಂಗರಾವ ದೇಸಾಯಿ ಕಲ್ಲಾಪೂರ ಇವರ ನಿಧನದಿಂದ ತೆರವಾದ ಸ್ಥಳದ ಬಗ್ಗೆ ಧಾರವಾಡ, ಕಾರವಾರ ಜಿಲ್ಲಾ ಮತದಾರ ಸಂಘದಿಂದ ನಡೆದ ಉಪಚುನಾವಣೆಯಲ್ಲಿ ಶ್ರೀ ಗುರುರಾವ ದೇಸಾಯಿಯವರು ಜಯಶೀಲರಾದರು.

# ಶಿಕ್ಷಣದಲ್ಲಿ ಹೊಸ ದೃಷ್ಟಿ

ಭಾರತೀಯ ಶಾಸನಸಭೆಯ ಅಧ್ಯಕ್ಷ ಶ್ರೀ ಜಿ. ವಿ. ಮಾವಳಣಕರರು ಗುಜರಾತಿನ ವಿಶ್ವವಿದ್ಯಾನಿಲಯದ ಬಗ್ಗೆ ಆಕಾಶವಾಣಿಯಲ್ಲಿ ಮಾತಾಡುವಾಗ "ಗುರುಕುಲವಾಸ ಪದ್ಧತಿಯ ವಿಶ್ವವಿದ್ಯಾನಿಲಯವೇ ಅತ್ಯುತ್ತಮವಾದುದು; ಅಂಥ ವಿಶ್ವವಿದ್ಯಾನಿಲಯವನ್ನು ಅಹಮದಾಬಾದಿನಲ್ಲಿ ಸ್ಥಾಪಿಸಲು ನಾವು ಯೋಜಿಸುತ್ತಿದ್ದೇವೆ" ಎಂದರು.

ಮೇಲಿನ ವಾಕ್ಯವನ್ನು ಕೇಳಿದ "ಅಪ್ಟುಡೇಟ್" ಭಾರತೀಯರು ಒಮ್ಮೆಲೇ ಗಾಬರಿಯಾಗಿರಬಹುದು." ಇವನೆಲ್ಲಿ ಬಂದ ಈ ಸನಾತನಿ; ಶಾಸನಸಭೆಯ ಅಧ್ಯಕ್ಷನೆನಿಸಿಕೊಂಡು ಆಕಾಶವಾಣಿಯಲ್ಲಿ ಸನಾತನಧರ್ಮವನ್ನು ಪ್ರಸಾರ ಮಾಡಲು!" ಎಂದು. ಅವರು ಹೌಹಾರುವುದು ಸಹಜವಾಗಿದೆ. ಆಂಗ್ಲ ವಿದ್ಯಾಭ್ಯಾಸದ ಮೂಲಕ ಭಾರತೀಯವೆನಿಸುವ ವೇಷ, ಭಾಷೆ, ಆಚಾರ, ವಿಚಾರ ಎಲ್ಲವನ್ನೂ ಹಳೆಯದೆಂದೂ ಹೀನವೆಂದೂ ಅನಾಗರಿಕವೆಂದೂ ಹೃದಯಾಂತರಾಳದಲ್ಲಿ ನಂಬುವ ಅನೇಕ ಸುಶಿಕ್ಷಿತಂಮನ್ಯರು ಭಾರತದಲ್ಲಿ ಇಂದು ಕೂಪಮಂಡೂಕಗಳಂತೆ ಇದ್ದಾರೆ. ಸಾಮಾನ್ಯ ಜನತೆಯ ತೋರಿಕೆಯ ಮರ್ಯಾದೆ ಅವರಿಗೆ ಸಿಕ್ಕಿದೆ. ಅಂಥವರಿಗೆ ಹೀಗೆನಿಸುವುದು ಆಶ್ಚರ್ಯವಲ್ಲ.

### ಭಾರತೀಯತೆಯ ಅರಿವಿಲ್ಲ

ಆದರೆ ಇದೇ "ನವನಾಗರಿಕರು" ಪರದೇಶಗಳಿಗೆ ಹೋದರೆ ತಮ್ಮ ದೇಶದ ವೈಶಿಷ್ಟ್ಯವೆಂದು ಹೇಳಿಕೊಳ್ಳಲು ಏನೂ ತಿಳಿಯದೆ ಅವರ ದೃಷ್ಟಿಯಲ್ಲಿ ಕೇವಲ ಪಾಶ್ಚಾತ್ಯಾನುಕರಣಪಟುಗಳೆನಿಸಿ ಗುಪ್ತವಾದ ಅಗೌರವಕ್ಕೆ ತುತ್ತಾಗುತ್ತಾರೆ. ಇನ್ನು ಅವರಲ್ಲಿಯ ಕೆಲವರು ಸ್ವಲ್ಪ ಚಾಣಾಕ್ಷತೆಯಿಂದ ತಾವು ಮನಃಪೂರ್ವಕವಾಗಿ ಒಳಿತೆನ್ನದಿದ್ದರೂ ಅಭ್ಯಸಿಸದಿದ್ದರೂ ಕೇವಲ ವೆಗ್ಗಳಕ್ಕಾಗಿ ನಮ್ಮದು ತತ್ವಜ್ಞಾನಿಗಳ ದೇಶ, ವೇದೋಪನಿಷದಾದಿ ಅತ್ಯುನ್ನತ ಮೇಧಾವಿತ್ವಪ್ರದರ್ಶಕ ಗ್ರಂಥರಾಶಿಗಳುಳ್ಳ ರಾಷ್ಟ್ರ ಎಂದು ಮುಂತಾಗಿ ಅನ್ಯದೇಶೀಯರೆದುರು ಕೊಚ್ಚಿಕೊಂಡು ತಮ್ಮ ಮರ್ಯಾದೆಯನ್ನು ತಾತ್ಕಾಲಿಕವಾಗಿ ಉಳಿಸಲು ಇಲ್ಲವೆ ಬೆಳೆಸಲು ಯತ್ನಿಸುತ್ತಾರೆ. ಈ ಮಹನೀಯರು ದೇಶದ ನಾನಾ ಕಾರ್ಯಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರ ಮುಖ್ಯ ಗುರಿ ಪಾಶ್ಚಾತ್ಯರ ವೇಷ, ಭೂಷಣ, ನಡೆನುಡಿ, ರಾಜ್ಯವ್ಯವಸ್ಥೆ, ಕುಟುಂಬ ವಿವಾಹಾದಿಗಳ ರೀತಿ, ಸಾಹಿತ್ಯ ವಿಜ್ಞಾನಾದಿಗ್ರಂಥಗಳು ಮತ್ತು ಶಿಕ್ಷಣ ಪದ್ಧತಿ ಇವುಗಳನ್ನು ಸ್ವದೇಶದಲ್ಲಿ ಸ್ಥಿರವಾಗಿ ಬೇರೂರುವಂತೆ ಮಾಡಬೇಕೆಂಬುದೇ. ಇವರು ಹಿಂದುಸ್ಥಾನದ ಭೂಗೋಲ, ಆರೋಗ್ಯ, ಇತಿಹಾಸ, ಸಮಾಜ, ಸಾಹಿತ್ಯ, ಮನೋಧರ್ಮ ಮುಂತಾದ ವಿಷಯಗಳ ಬಗ್ಗೆ ಮೇಲಿಂದ ಮೇಲೆ ತಾತ್ವಿಕಾಭ್ಯಾಸವನ್ನು ಮಾಡಿದವರಲ್ಲದೆ, ಆ ತತ್ವಗಳನ್ವಯವಾಗಿ ಭಾರತೀಯ ಜೀವನ ಪಾಶ್ಚಾತ್ಯಜೀವನದಿಂದ ಹೇಗೆ ಮತ್ತು ಏಕೆ ಭಿನ್ನವಾಗಿದೆ ಎಂಬುದರತ್ತ ಲಕ್ಷ್ಯ ಹಾಕಿದವರಲ್ಲ. ಆದುದರಿಂದ "ಅಲ್ಲಿ ಸಲ್ಲುವುದು ಇಲ್ಲಿಯೂ ಸಲ್ಲಲೇ ಬೇಕು" ಎಂದು ಪಾಶ್ಚಾತ್ಯತೆಯ ಅಚ್ಚಿನಲ್ಲಿ ಭಾರತೀಯರನ್ನು ತುಂಬಿ ವಿರೂಪಗೊಳಿಸಿ ಹೊರದೆಗೆಯಬೇಕೆಂದು ಇಂಥವರು ಪ್ರತಿಪಾದಿಸುತ್ತ ತಿರುಗುತ್ತಾರೆ.

ಭಾರತೀಯ ಆಚಾರವಿಚಾರಗಳಲ್ಲಿ ಸದ್ಯಃ ದೋಷಗಳೇ ಇಲ್ಲವೆಂದು ಯಾರೂ ತಿಳಿಯಕೂಡದು. ಆದರೆ ಅವನ್ನು ಶೋಧಿಸಿ ತೆಗೆದೊಗೆದು ವಿದೇಶಗಳಲ್ಲಿ ನಮ್ಮ ಪ್ರಸಿದ್ಧಿಗೆ ಕಾರಣವಾದ ತತ್ವ, ಧರ್ಮ, ಸಾಮಾಜಿಕ ಮತ್ತು ಶೈಕ್ಷಣಿಕ ವ್ಯವಸ್ಥೆಗಳನ್ನು ಅಭ್ಯಸಿಸಿ, ಪುರಸ್ಕರಿಸಿ, ಪುನರುಜ್ಜೀವನಗೊಳಿಸಿ, ನಮ್ಮತನವನ್ನು ಬೆಳೆಸಿಕೊಂಡು ಜಾಗತಿಕ ಸಂಸ್ಕೃತಿ ನಾಗರಿಕತೆಗಳಿಗೆ ನಮ್ಮ ವಿಶಿಷ್ಟವೂ ಸರ್ವಾರಾಧ್ಯವೂ ಎನಿಸುವ ಅಂಶಗಳನ್ನು ದಾನ ಮಾಡುವ ಗುರಿಯಿಂದ ಕೆಲಸ ಮಾಡುವುದು ವಿವೇಕಿಗಳ ಲಕ್ಷಣ. ಈ ದೃಷ್ಟಿಯಿಂದ ಅವಲೋಕಿಸಿದರೆ ನಮ್ಮ ಗುರುಕುಲವಾಸ ಪದ್ಧತಿಯಿಂದ ಆದ ಲಾಭದ ಪರಿಚಯ ನಮಗೆ ಚೆನ್ನಾಗಿ ಆಗುವುದು.

ಗುರುಕುಲವಾಸಪದ್ಧತಿಯ ಆದರ್ಶವು ಸಾಮ್ಯವಾದದ ಕೆಲವಂಶಗಳನ್ನು ಅಳವಡಿಸಿಕೊಂಡಿತ್ತೆಂದರೆ ಅಚ್ಚರಿಯಲ್ಲ. ಧರ್ಮದ ತವರಾದ ಭಾರತ ಸಾಮ್ಯವಾದವೆಂಬ ಶಬ್ದದ ಮೂಲಕ ಆ ತತ್ವವನ್ನು ರಾಷ್ಟ್ರದಾದ್ಯಂತ ರಾಜಕೀಯವಾಗಿ ಪ್ರಸರಿಸಲು ಪ್ರಯತ್ನಿಸಿದ್ದಕ್ಕೆ ನಿದರ್ಶನವಿಲ್ಲದಿದ್ದರೂ ಧರ್ಮದ ಹೆಸರಿನಲ್ಲಿ ಅದರ ಅರ್ಥವನ್ನು ಬಳಸಿಕೊಂಡ ಅನೇಕ ನಿದರ್ಶನಗಳಿವೆ. ಅವುಗಳಲ್ಲಿ ಯಜ್ಞಯಾಗಾದಿ ವಿಧಿಗಳೂ ಶಿಕ್ಷಣ ಪದ್ಧತಿಯೂ ಕೆಲವೆನಿಸಿವೆ. ಮೊದಲಿನವು ಅರ್ಥವಿತರಣವನ್ನೂ ವಿದ್ವತ್ಪ್ರೋತ್ಸಾಹವನ್ನೂ ಏಕಕಾಲದಲ್ಲಿ ಸಾಧಿಸಿದರೆ ಎರಡನೆಯದು ಪ್ರಜಾಹಿತಕ್ಕೆ, ರಾಷ್ಟ್ರೀಯ ಭ್ರಾತೃತ್ವಕ್ಕೆ ಅವಶ್ಯಕವಾದ ನಡೆ, ನುಡಿ, ಆಚಾರ, ವಿಚಾರಗಳನ್ನು ಚಿಕ್ಕತನದಿಂದಲೇ ಪ್ರಜೆಗಳಲ್ಲಿ ಮತ್ತು ಅರಸುಮನೆತನದವರಲ್ಲಿ ರೂಪಿಸಲು ಕಾರಣವಾಯಿತು.

### ಸರಕಾರದ ಮೇಲ್ಪಂಕ್ತಿ

"ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ" ಎಂಬ ಆದರ್ಶಕ್ಕೆ ಪ್ರಾಚೀನ ಭಾರತ ಮನ್ನಣೆ ಕೊಟ್ಟಿತ್ತು. ಆ ಕಾರಣದಿಂದಲೇ ಗುರು, ಜ್ಞಾನ ಮತ್ತು ಶೀಲಗಳಿಗೆ ಧನ, ವಯಸ್ಸು ಮತ್ತು ಅಧಿಕಾರಗಳು ಸರಿಗಟ್ಟದಾದವು. ಚಂದ್ರಗುಪ್ತನು ಚಕ್ರವರ್ತಿಯಾದ ಮೇಲೂ ಬಡವನಾದ ಚಾಣಕ್ಯನಿಂದ ಶೂದ್ರನೆಂದು ಕರೆಸಿಕೊಂಡು ವಿಧೇಯತೆಯಿಂದ ಬಾಳಿದ್ದು ಇದಕ್ಕೊಂದು ದೃಷ್ಟಾಂತ. ಕೃಷ್ಣ ಸುಧಾಮರ ವೃತ್ತಾಂತವಂತೂ ಜನಜನಿತವಾಗಿದೆ. ಗುರುವಿನ ದೃಷ್ಟಿಯಲ್ಲಿ ಶಿಷ್ಯರು ಶಿಷ್ಯರಷ್ಟೆ; ಇವನು ರಾಜನ ಮಗ, ಅವನು ದಾಸನ ಮಗ ಎಂಬ ಭೇದವಿದ್ದಿಲ್ಲ. ರಾಜರು "ಪೂಜ್ಯ ಪೂಜಾ ವ್ಯತಿಕ್ರಮ"ವನ್ನು ಮಾಡದಿರುವ ವರೆಗೆ ಭಾರತದಲ್ಲಿ ಹೆಸರಾದ ಕುಲಪತಿಗಳು ಬಾಳಿ ಸಂಸ್ಕೃತಿ ನಾಗರಿಕತೆಗಳಿಗೆ ನೀರೆರೆದರು. ಅಯೋಗ್ಯರಿಗೆ ಮನ್ನಣೆ ಸಿಕ್ಕಿದಾಗ ದೇಶದಲ್ಲಿ ಅನಾಗರಿಕತೆಯ ಚಟುವಟಿಕೆಗಳಿಗೆ ಅವಕಾಶವುಂಟಾಯಿತು. ಏಕೆಂದರೆ ರಾಜ ಅಥವಾ ಸರಕಾರ ಮಾನ್ಯ ಮಾಡುವ ಅಂಶಗಳನ್ನು ಮತ್ತು ವ್ಯಕ್ತಿಗಳನ್ನು ಕಾಲಕ್ರಮೇಣ ಸಾಮಾನ್ಯ ಪ್ರಜೆಗಳು ಮಾನ್ಯ ಮಾಡುವುದು ಇಲ್ಲಿಯ ರೂಢಿ. ಬ್ರಿಟಿಶ್ ಸರಕಾರವಿದ್ದಾಗ ಬ್ರಿಟಿಶ್ ವ್ಯವಹಾರಕ್ಕೆ ಕಾಲು, ಅರ್ಧ, ಮುಕ್ಕಾಲು ಮನಸ್ಸುಗಳಿಂದ ಅನಿಷೇಧಭಾವ ಅಥವಾ ಪುರಸ್ಕಾರಭಾವಗಳನ್ನು ನಮ್ಮ ಜನರು ತಾಳಿದ್ದು ಸ್ವಯಂವೇದ್ಯವಿದೆ. "ರಾಜಾ ಕಾಲಸ್ಯ ಕಾರಣಂ" ಎಂಬುದಕ್ಕೆ "ರಾಜಾ (ಸರಕಾರ) ರಚಯಿತಾ ಮತೇಃ" ಎಂದು ಅರ್ಥ ಮಾಡಬೇಕು. ಆದುದರಿಂದ ಸರಕಾರದಲ್ಲಿ ಅಧಿಕೃತರಾದ ಜನಮಾನ್ಯರಲ್ಲಿ ಕೆಲವರಾದರೂ ಇಂದು ಭಾರತೀಯತೆಯತ್ತ ಜನರಮನವನ್ನು ಸೆಳೆಯಲು ಯತ್ನಿಸುತ್ತಿರುವುದು ಶುಭೋದಯವೆಂದೇ ಹೇಳಬೇಕು. ಅಮೇರಿಕದ ಸಸಸದಾಚಾರಗಳನ್ನು ತಮ್ಮ ವೈಶಿಷ್ಟ್ಯಗಳೆಂದು ಬೆಳೆಸಿಕೊಂಡು ಹೆಮ್ಮೆ ಪಡುವ ಮನೋವೃತ್ತಿ ಅಲ್ಲಿ ಪ್ರಚುರವಾಗುತ್ತಿದೆ. ರಾಷ್ಟ್ರೀಯತೆಯ ಈ ಯುಗದಲ್ಲಿ ರಾಜ ಸತಾಮಸ ಭಾವನೆಗಳಿಂದ ತಮ್ಮ ಆಚಾರವಿಚಾರಗಳನ್ನು ಸಂಕರವಾಗದಂತೆ ಇಟ್ಟುಕೊಳ್ಳುವ ಫಲ ಕೆಟ್ಟುದಾದರೂ ಸಾತ್ವಿಕ ಭಾವನೆಯಿಂದಾದರೂ ಅಸತ್ ಅಲ್ಲದಿದ್ದರೆ ಸದಾಚಾರ ಸದ್ವಿಚಾರಗಳನ್ನಾದರೂ ನಮ್ಮದಾಗಿ ಬೆಳೆಸಿಕೊಂಡು ಅನ್ಯಾನುಕರಣಕ್ಕೆ ಯೋಗ್ಯವೆನಿಸುವಂತೆ ಮಾಡುವುದು ಸ್ವಪರಹಿತ ಸಾಧಕವಲ್ಲವೆ?

### ಗುರುಕುಲದ ಆದರ್ಶ

ಗುರುವಿನ ಗುಲಾಮಗಿರಿ ಅತಿರೇಕವಾಗಿ ಶಿಷ್ಯಬುದ್ಧಿ ವೈಶದ್ಯಪಡೆಯುವ ಬದಲು ಸಂಕುಚಿತವಾಗುತ್ತ ಬಂದ ಕಾಲವೂ ಉಂಟು. ಅದರದು ಆ ಶಿಕ್ಷಣಪದ್ಧತಿಯ ದೋಷವಲ್ಲ. ಸದ್ಗುರು ದುರ್ಲಭನಾಗುತ್ತ ಬಂದ ಸಾಮಾಜಿಕ ಅಧಃಪಾತದ ಹೆಗ್ಗುರುತು. ಜಗತ್ತಿನ ಯಾವ "ಇಜಂ" ಅಥವಾ ತತ್ವಪ್ರಣಾಲಿಯೇ ಆಗಲಿ, ದುರ್ಬಲ ಮನಸ್ಕರ ಕೈಯಲ್ಲಿ ಸಿಕ್ಕಾಗ ಕಾಪಟ್ಯಕ್ಕೆಡೆಗೊಟ್ಟು ಅದರ ಆರಾಧಕರಿಗೆ ಹಾನಿಯನ್ನುಂಟು ಮಾಡದಿರದು. ಅದೇ ಮೇರೆಗೆ ಆದರ್ಶ ಗುರುಕುಲವು ದುರಾದರ್ಶವಾಗುತ್ತ ಬಂದುದಕ್ಕೆ ರಾಜಕೀಯ ಇಲ್ಲವೆ ಸಾಮಾಜಿಕ ಗಲಿಬಿಲಿಗಳು ಕಾರಣವಾಗಿದ್ದುವು. ಒಂದುಯುದ್ಧ ನಡೆದೊಡನೆ ಹೇಗೆ ಅದರಲ್ಲಿ ಭಾಗವಹಿಸಿದ ದೇಶದಲ್ಲಿ ದುರಭ್ಯಾಸ, ದುರ್ನೀತಿಗಳು ಕೆಲಕಾಲ ಉತ್ಕರ್ಷ ಹೊಂದುವುವೋ ಹಾಗೇ ಒಂದು ದೊಡ್ಡ ಧಾರ್ಮಿಕ, ಸಾಮಾಜಿಕ ಅಥವಾ ರಾಜಕೀಯ ಪರಿವರ್ತನೆಯುಂಟಾದೊಡನೆ ಆದರ್ಶ ಪರಂಪರೆಗಳ ಬುಡ ಕೆಲಕಾಲ ಸಡಿಲವಾಗುವುದು. ಅಷ್ಟು ಮಾತ್ರದಿಂದ ಆ ಆದರ್ಶ ದುಷ್ಟವೆನ್ನಲು ಬಾರದು.

ಆಂಗ್ಲದೇಶದಲ್ಲಿಯೂ ಇಂಥ ಗುರುಕುಲಗಳಿವೆ ಎಂಬುದು ಬಹಳ ಜನ ಭಾರತೀಯರಿಗೆ ತಿಳಿದಿರಲಾರದು ಏಕೆಂದರೆ, ಅವಕ್ಕೆ ನಮ್ಮ ದೇಶದಲ್ಲಿ ಸಿಕ್ಕಿದ್ದಷ್ಟು ಪುರಸ್ಕಾರ, ಪ್ರಚಾರ, ಪ್ರಾಧಾನ್ಯಗಳು ಅಲ್ಲಿ ಸಿಕ್ಕಿಲ್ಲ. ಈಗೀಗ ಅವಕ್ಕೆ ಅಲ್ಲಿಯೂ ಪ್ರಾಶಸ್ತ್ಯ ಹೆಚ್ಚುತ್ತಿದೆ. ಪಥಾರ್ ಶಿಕ್ಷಣಪದ್ಧತಿಯನ್ನು ಅನುಸರಿಸಿ ಪಾಠ ಹೇಳಲು ತರಬೇತಾದ ಶಿಕ್ಷಕನಲ್ಲಿ ಗುರುಕುಲಪದ್ಧತಿಯಗುರುವಿನಅಧಿಕಾರವೂವಿದ್ವತ್ತೆಯೂ ಕೆಲಮಟ್ಟಿಗೆ ಇರುವುದೆಂಬುದು ಸೂಕ್ಷ್ಮಜ್ಞರಿಗೆ ಅವಗತವಾಗದಿರದು. ಒಬ್ಬ ಶಿಕ್ಷಕನು ಒಂದು ಕೈಗಾರಿಕೆಯ ಮಾಧ್ಯಮದ ಮೂಲಕ ಹಲವಾರು ಶಾಸ್ತ್ರಗಳಿಗೂ ನೀತಿ, ನಡತೆ, ವ್ಯವಹಾರಗಳಿಗೂ ಸಂಬಂಧಿಸಿದ ಅಂಶಗಳನ್ನು ಶಿಷ್ಯರಿಗೆ ಹೇಳಿಕೊಡಬೇಕೆಂಬ ಮತ್ತು ಪರೀಕ್ಷೆಯನ್ನು ಇಂದಿನಂತೆ ನಡೆಸದೆ ಶಿಷ್ಯರ ಶೈಕ್ಷಣಿಕ ಮಟ್ಟವನ್ನು ಸ್ವಕೀಯ ಅನುಭವದಿಂದ ನಿರ್ಣಯಿಸಬೇಕೆಂಬ ಕ್ರಮದಲ್ಲಿ ಗುರುವಿನ ಸರ್ವಾಧಿಕಾರ ಕೆಲಮಟ್ಟಿಗೆ ಇದೆಯೆನ್ನುವುದು ಸ್ಪಷ್ಟವಾಗುವುದಿಲ್ಲವೆ? ಮಾನಸಶಾಸ್ತ್ರದ ದೃಷ್ಟಿಯಿಂದಾದರೂ ಗುರುವಿಗೆ ಗುರುತ್ವವನ್ನು ಕೊಟ್ಟ ಹೊರತು ಅವನು ಕಲಿಸುವ ಯಾವ ಪಾಠವೂ ಶಿಷ್ಯರಿಗೆ ಬುದ್ಧಿಗತವಾದರೂ ಹೃದ್ಗತವಾಗದು. ಹೃದ್ಗತವಾಗದ ವಿದ್ಯೆ ಸಾರ್ಥಕವೆನಿಸದು, ಅನುಭವಕ್ಕೆ ತಂದುಕೊಳ್ಳದ ಜ್ಞಾನ ಪ್ರಯೋಜನಕರವೆನಿಸದು. ಈ ವಿಚಾರಗಳನ್ನು ಚೆನ್ನಾಗಿ ಮಥಿಸಿ ನೋಡಿ ಗುರುಕುಲಪದ್ಧತಿಯನ್ನು ಭಾರತದಲ್ಲಿ ಪುನರುಜ್ಜೀವನಗೊಳಿಸುವ ಹೊಸ ದೃಷ್ಟಿ, ಮಕ್ಕಳ ಶಿಕ್ಷಣದ ಹೊಣೆಹೊತ್ತ ಮಾತಾಪಿತೃಗಳು ಮತ್ತು ಶಿಕ್ಷಣ ನಿಯಂತೃಗಳಲ್ಲಿ ಇಂದು ಮೂಡಬೇಕಾಗಿದೆ.

—ಬಿ. ಎಚ್. ಶ್ರೀ.

## 'ಕೇಶಿರಾಜ'



ಫ್ರಾನ್ಸಿನ ನಾಟಿಕ್ ಎಂಬ ಪ್ರಾಂತದ ನಟವರ ಪಿಯರೆ ಮಿಶಿಯು ಮನಬಂದಂತೆ ತನ್ನ ಕೂದಲುಗಳನ್ನು ಆಡಿಸಬಲ್ಲವನಾಗಿದ್ದನಂತೆ. ಅವು ಅವನ ಇಷ್ಟದಂತೆ ನಿಗುರಿ ನಿಲ್ಲುತ್ತಿದ್ದವು, ಬಾಗಿ ಬಳುಕಿ ಗುಂಗುರಾಗುತ್ತಿದ್ದವು, ನೇರವಾಗಿ ಅಡ್ಡ ಮಲಗುತ್ತಿದ್ದವು! ಮನುಷ್ಯನಲ್ಲಿರುವ ಈ ಅಪೂರ್ವ ಶಕ್ತಿಗೆ ಕೂದಲಿನ ಮಾಂಸ ಅತಿಯಾಗಿ ಬೆಳೆದಿರುವದೇ ಕಾರಣವೆಂದು ಡಾ. ಆಗಸ್ಟೆ ಕ್ಯಾಬೆನಿಸರು ಹೇಳುತ್ತಾರೆ. ಈ 'ಕೇಶಿರಾಜ'ನ ಊರ್ಧ್ವರೋಮಪ್ರತಾಪವೆಷ್ಟಿತ್ತೆಂದರೆ ತನ್ನ ಕೂದಲಿನ ಯಾವ ಸೂಕ್ಷ್ಮ ಭಾಗವನ್ನು ಬೇಕಾದರೂ ಎಷ್ಟು ಬೇಕೆಂದರಷ್ಟು ಬಗ್ಗಿಸುತ್ತಿದ್ದನು; ಒಂದೇ ಕೂದಲಿನ ಒಮ್ಮಗ್ಗುಲು ಗುಂಗುರಾಗುವಂತೆಯೂ ಇನ್ನೊಂದು ಮಗ್ಗುಲು ನೆಟ್ಟಗಿರುವಂತೆಯೂ ಇವನು ಮಾಡಬಲ್ಲವನಾಗಿದ್ದನು!

ವಿಚಾರದ್ವಂದ್ವ

# ಜನ್ಮದಿಂದಲೇ ವರ್ಣ

ಚಾತುರ್ವರ್ಣ್ಯ ವ್ಯವಸ್ಥೆಯು ಜನ್ಮದಿಂದಲೋ ಗುಣಕರ್ಮದಿಂದಲೋ ಎಂಬುದೊಂದು ದೊಡ್ಡ ಸಮಸ್ಯೆಯಾಗಿ ಕುಳಿತಿದೆ. ಶ್ರೀ ಭಗವದ್ಗೀತೆಯು "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮದಿಂದಲೇ ಹೊರತು ಜನ್ಮದಿಂದಲ್ಲ. ಎಂತ ಸ್ಪಷ್ಟವಾದ ಮಾತು. ಆದರೆ ನಮ್ಮ ಅಭಿಪ್ರಾಯದಲ್ಲಿ ಜನ್ಮವೇ ಪ್ರಧಾನ. ಯಾಕೆಂದರೆ ಕೇವಲ ಗುಣಕರ್ಮ ಸ್ವಭಾವದಿಂದಲೇ ವರ್ಣ (ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ) ವನ್ನು ನಿರ್ಣಯಿಸುವುದಾದರೆ ಅದು ಅವ್ಯವಹಾರ್ಯವಾಗುವದು. ಒಬ್ಬನ ಗುಣವು ಬ್ರಾಹ್ಮಣೋಚಿತವಾಗಿದ್ದು ಕರ್ಮವು ಶೂದ್ರಯೋಗ್ಯವಾದರೆ ಆಗ ಅವನಿಗೇನೆನ್ನಬೇಕು? ಈ ರೀತಿ ವ್ಯವಸ್ಥೆ ಮಾಡಹೋದರೆ ಒಬ್ಬ ಬೆಳಿಗ್ಗೆ ಕ್ಷತ್ರಿಯನಾಗಿ ಮಧ್ಯಾಹ್ನ ಬ್ರಾಹ್ಮಣನಾಗಿ ಸಾಯಂಕಾಲ ವೈಶ್ಯನಾಗಿರಬಹುದು. ಹೀಗೆ ಗುಣಕರ್ಮಗಳು ಚರ. ಮತ್ತು ಅದೇ ಭಗವದ್ಗೀತೆ ಹುಟ್ಟಿದ್ದು ಅರ್ಜುನನಿಗಾಗಿ. ಅರ್ಜುನನು ಪ್ರಾರಂಭದಲ್ಲೇ ಬ್ರಾಹ್ಮಣೋಚಿತವಾದ ಗುಣಕರ್ಮಗಳನ್ನು ಸ್ವೀಕರಿಸಿ ಸನ್ಯಾಸಿಯಾಗಲು ಸಿದ್ಧನಾಗಿದ್ದ. ಆದರೆ ಅವನಿಗೇಕೆ ಕೃಷ್ಣ ಬ್ರಾಹ್ಮಣನೆಂದು ಸ್ವೀಕರಿಸದೆ ನೀನು ಕ್ಷತ್ರಿಯನಾದ್ದರಿಂದ ಯುದ್ಧ ಮಾಡಬೇಕಾದ್ದೇ ನಿನ್ನ ಧರ್ಮವೆಂದು ಒತ್ತಾಯಪಡಿಸಿದ? ಅದೇ ಭಾರತದಲ್ಲೇ ದ್ರೋಣಾಶ್ವತ್ಥಾಮರು ಶುದ್ಧ ಕ್ಷತ್ರಿಯವೃತ್ತಿಯನ್ನವಲಂಬಿಸಿದರೂ ಅವರಿಗೆ ಕ್ಷತ್ರಿಯರೆಂತ ಸಂಬೋಧಿಸದೆ ಜನ್ಮವನ್ನೇ ಆಧಾರವಾಗಿಟ್ಟುಕೊಂಡು ಅವರನ್ನು ಬ್ರಾಹ್ಮಣರೆಂತಲೇ ಮಾನ್ಯಮಾಡಿದೆ. ಅರ್ಥಾತ್ ಗುಣಕರ್ಮಗಳಿಂದವರು ಕ್ಷತ್ರಿಯರಾಗಿದ್ದರೂ ಜನ್ಮದಿಂದ ಬ್ರಾಹ್ಮಣರೇ ಸರಿ.

ಮೂಲತಃ ಮಾನವರೆಲ್ಲರೂ ಒಂದೇ ಜಾತಿ ನಿಜ. ಆದರೆ ಸತ್ವರಜಸ್ತಮೋ ಗುಣಗಳ ಹೆಚ್ಚು ಕಡಿಮೆಯಿಂದ ಅವರವರ ಸ್ವಭಾವಗಳೂ ಹೆಚ್ಚುಕಡಿಮೆಯಾಗಿಯೇ ಇದ್ದವು. ಈ ಗುಣವೈಷಮ್ಯವು ಸಮಾಜಪೋಷಣೆಗೆ ಅಗತ್ಯವೆಂದು ಕಂಡುಬಂದಿದ್ದರಿಂದ ನಾಲ್ಕಾಗಿ ವಿಂಗಡಿಸಬೇಕಾಯಿತು. ವಿಚಾರಶಕ್ತಿ, ರಕ್ಷಣಾಶಕ್ತಿ, ಸೇವಾಶಕ್ತಿ ಇವು ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ವ್ಯಷ್ಟಿಯಾಗಿದ್ದರೂ ಈ ಸ್ವಭಾವದ ವಿಶೇಷತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಒಂದೊಂದು ಪ್ರಧಾನ ಗುಂಪಾಗಿ ವಿಂಗಡಿಸಿ ಸಮಾಜದ ಹಿತವನ್ನು ಕಾದಿದೆ.

ಜಗತ್ಪ್ರಾರಂಭದಲ್ಲೇ ಈ ವ್ಯವಸ್ಥೆಯು ವಿಂಗಡಿಸಲ್ಪಟ್ಟಿದ್ದರೂ ಇದರ ಆವಶ್ಯಕತೆಯನ್ನರಿತು ಸ್ವರೂಪತಃ ಕಾಪಾಡಿಕೊಂಡು ಬಂದದ್ದು ಹಿಂದೂಸಮಾಜವೊಂದೇ ಸರಿ. ಎಲ್ಲ ಮಾನವರ ಸಮಾಜದಲ್ಲಿ ಈ ಭೇದವು ಸ್ವಭಾವತಃ ಇದ್ದದ್ದೇ.

ಒಂದು ಮಾವಿನ ತೋಪಿನಲ್ಲಿ ಇದು [illegible], ಇದು ರಸಪುರಿ, ಇದು ಮಲಗೋವಾ ಎಂದು ವಿಂಗಡಿಸುವಾಗ ಅದರ ಗುಣಕರ್ಮಗಳನ್ನನುಸರಿಸಿ ಬೇರೆಬೇರೆ ಗುಂಪಾಗಿ ಭಾವಿಸುವೆವಾದರೂ ಅದು ಮೊದಲಿರಲಿಲ್ಲವೆಂದಾಗಲಿ ಆ ಗುಣಕರ್ಮಗಳು ಅದಕ್ಕೆ ಸ್ವಭಾವತಃ ಜನ್ಮದಿಂದಲೇ ಬಂದಿವೆ. ಒಂದು ವೇಳೆ ಭೂಗುಣದಿಂದ ಗುಣದಲ್ಲಿ ಕೊಂಚ ಹೆಚ್ಚು ಕಡಿಮೆ ಆದರೂ ಅದರ ವಂಶಪರಂಪರೆಯಿಂದಲೇ ಜಾತಿಯನ್ನು ನಿರ್ಣಯಿಸುತ್ತೇವೆ.

## ವೇದ ಕೊಟ್ಟ ದೃಷ್ಟಾಂತ

ವೇದದಲ್ಲಿ ಬ್ರಾಹ್ಮಣೋಸ್ಯ ಮುಖಮಾಸೀತ್, ಇತ್ಯಾದಿ ಒಂದೇ ಶರೀರದ ಬೇರೆ ಬೇರೆ ಅವಯವಗಳ ದೃಷ್ಟಾಂತ ಕೊಟ್ಟು ಚಾತುರ್ವರ್ಣ್ಯವ್ಯವಸ್ಥೆಯು ಜನ್ಮದಿಂದಲೇ ಸಿದ್ಧವೆಂಬುದನ್ನೂ ಪರಸ್ಪರ ಸೌಹಾರ್ದಭಾವವೇ ಇದರ ಗುರಿ ಎಂಬುದನ್ನೂ ಬಲಪಡಿಸಿದೆ. ಮುಖವು ತನ್ನ ಗುಣಕರ್ಮವಾದ ಮಾತು, ಆಹಾರ ಮುಂತಾದುದನ್ನು ಮಾಡಲಾರದ ಸ್ಥಿತಿಯಲ್ಲಿದ್ದರೂ ಅದಕ್ಕೆ ಮುಖ ಎನ್ನುವೆವೇ ಹೊರತು ಕಾಲು ಎನ್ನಲಾರೆವು. ಕಾಲಿನ ಗುಣಕರ್ಮವು ಅದರ ಜನ್ಮದಿಂದಲೇ ಸಿದ್ಧವಾಗುವುದೇ ಹೊರತು ಅದರ ಗುಣಕರ್ಮಗಳನ್ನು ನೋಡಿ ಆ ಮೇಲೆ ಅದಕ್ಕೆ ಹೆಸರಿಡುವುದಿಲ್ಲ. ಒಬ್ಬನು ಅಭ್ಯಾಸಬಲದಿಂದ ಕೈಯಿಂದಲೇ ನಡೆದು ಬಿಡಬಲ್ಲನಾದರೂ ಆಗಲೂ ಅದಕ್ಕೆ 'ಕೈ' ಎನ್ನುವೆವೇ ಹೊರತು 'ಕಾಲು' ಎನ್ನುವದಿಲ್ಲ. ಅದ್ದರಿಂದ ವರ್ಣವು ಹುಟ್ಟಿನಿಂದಲೇ ಹೊರತು ಗುಣಕರ್ಮಗಳ ಮೇಲೆ ಮಾತ್ರವಲ್ಲ.

ಬ್ರಾಹ್ಮಣನು ಶೂದ್ರನಾಗಬಹುದು, ಶೂದ್ರ ಬ್ರಾಹ್ಮಣನಾಗಬಹುದು. ಯಾರು ಯಾವ ವರ್ಣಕ್ಕೆ ಬೇಕಾದರೂ ಸೇರಬಹುದು, ಎನ್ನುವುದೂ ಸರಿಯಲ್ಲ. ಸಮಾಜದ ಹಿತದೃಷ್ಟಿಯಿಂದ ಆಯಾ ವರ್ಣದವರು ತಮ್ಮ ವಂಶಪರಂಪರೆಯಿಂದ ನಡೆದು ಬಂದ ಆಯಾ ಕೆಲಸಗಳನ್ನೇ ಮಾಡಬೇಕು. ಅವನಲ್ಲಿ ಗುಣ ಕರ್ಮಗಳ ನ್ಯೂನತೆಯಿದ್ದರೆ ಅದನ್ನು ಗಳಿಸಿಕೊಂಡು ತನ್ನ ಪಾಲಿನ ಸೇವೆಯನ್ನು ಸಮಾಜಕ್ಕೆ ಅರ್ಪಿಸಲೇಬೇಕು. ಇದರಿಂದಲೇ ಸಮಾಜಕ್ಕೆ ಹಿತ. ಅದಿಲ್ಲದೆ ಯಾರು ಯಾವ ವರ್ಣಕ್ಕೆ ಬೇಕಾದರೂ ಹೋಗಬಹುದೆಂದು ಬಿಟ್ಟರೆ, ವ್ರತ, ಉಪವಾಸ, ತಪಶ್ಚರ್ಯಗಳ ಕಷ್ಟ ಯಾರಿಗೆ ಬೇಕೆಂದು ಬ್ರಾಹ್ಮಣನೂ ವೈಶ್ಯನಾಗಲು ಹವಣಿಸಿಯಾನು. ಹೀಗೇ ಶೂದ್ರನೂ ಧನಲೋಭದಿಂದ ವೈಶ್ಯನಾದಾನು. ಆಗ ಸಮಾಜವು ತಲೆಕಾಲುಗಳಿಲ್ಲದಂತಾದೀತು. ಹೀಗಾಗಿ ಸಮಾಜದಲ್ಲಿ ಒಬ್ಬರಿಗೂ ನಿರ್ದಿಷ್ಟ ಕೆಲಸಗಳಿಲ್ಲದೆ ಅಶಾಂತತೆ ಮೂಡುವದು.

ಆಯಾ ಯೋಗ್ಯತೆಯುಳ್ಳವನು ಆಯಾ ವರ್ಣದವನಾಗಬಹುದೆಂದರೆ ಆ ಯೋಗ್ಯತೆಯನ್ನು ನಿರ್ಣೈಸುವರಾರು? ಯಾರು ಬೇಕಾದರೂ ಸೇವೆ ಮಾಡಬಹುದು ಯಾರು ಬೇಕಾದರೂ ಸೇವೆಮಾಡಿಸಿಕೊಳ್ಳಬಹುದೆಂದರೆ ಎಲ್ಲರೂ ಸೇವೆ ಮಾಡಿಸಿಕೊಳ್ಳುವವರೇ ಹೊರತು ಸೇವೆ ಮಾಡಲು ಯಾರೂ ಸಿದ್ಧರಾಗಲಾರರು. ಇವನು ಯಾವ ವರ್ಣದ ಯೋಗ್ಯತೆಯುಳ್ಳವನು, ಇವನು ಸಮಾಜದಲ್ಲಿ ಯಾವ ಕೆಲಸ ಮಾಡಬೇಕೆಂದು ನಿರ್ಣೈಸಲು ಸರ್ಕಾರವೇ ಒಂದು ಪರೀಕ್ಷಾಸಮಿತಿಯನ್ನು ನೇಮಿಸಬೇಕಾದೀತು. ಇವನು ಇಂಥ ವರ್ಣಕ್ಕೆ ಸೇರಬಹುದೆಂದು ಅವನ ಗುಣಕರ್ಮಗಳನ್ನೆಲ್ಲಾ ಸಂಗ್ರಹಿಸಲಿಕ್ಕೆ ಕೆಲವು ತಿಂಗಳಾದರೂ ಬೇಕು; ನಂತರ ಇವನು ಅದೇ ಗುಣಕರ್ಮದಲ್ಲಿರುವನೋ ಅಥವಾ ಬದಲಾಯಿಸಿರುವನೋ ಎಂತ ಆಗಾಗ ಪರೀಕ್ಷೆ ಮಾಡುತ್ತಿರಬೇಕಾಗುವುದು. ಮತ್ತು ಯುದ್ಧದಂಥ ಸಂಕಟ ಸಮಯದಲ್ಲಿ ಕ್ಷತ್ರಿಯತ್ವವು ಬೇಡೆನಿಸಿದಾಗ ಅವನು ಬ್ರಾಹ್ಮಣನಿಗುಚಿತವಾದ ಗುಣಕರ್ಮಗಳನ್ನು ಆಶ್ರಯಿಸಬಹುದು. ಹೀಗೆ ಒಂದಲ್ಲ ಎರಡಲ್ಲ ಹಲವು ತೊಡಕುಗಳು ಗಂಟು ಬೀಳುವವು.

ಆಗಾಗ ಬದಲಾಗಬಹುದಾದ ಗುಣಕರ್ಮಗಳೇ ವರ್ಣಕ್ಕೆ ಮೂಲವೆಂತ ಸ್ವೀಕರಿಸಿದರೆ ತಾಸಿಗೊಂದು ದಿನಕ್ಕೊಂದು ಜಾತಿಯಾಗಬೇಕಾಗಬಹುದಾದ್ದರಿಂದ ಅದು ವ್ಯವಹಾರಕ್ಕೆ ಯೋಗ್ಯವಾಗುವದಿಲ್ಲ; ಮತ್ತು ಒಬ್ಬನ ಕರ್ಮಗಳು ಬಹಿರಂಗದಲ್ಲಿ ಕಾಣಬಹುದಾದರೂ ಗುಣಗಳು ವ್ಯಕ್ತವಾಗದೆ ಆಗಲೂ ವರ್ಣವು ಅಪೂರ್ಣವಾಗಿಯೇ ಇರುವದು.

## ವೃತ್ತಿಶಿಕ್ಷಣ ಸೌಲಭ್ಯ

ತಂದೆ ತಾಯಿಗಳ ಗುಣ ಕರ್ಮಗಳನ್ನೇ ಮಕ್ಕಳು ಅನುಸರಿಸುವದು ಹೆಚ್ಚು ಸುಲಭವೂ ಸ್ವಾಭಾವಿಕವೂ ಆಗಿದೆ. ಚಮ್ಮಾರನೊಂದು ಜಾತಿ, ಕಮ್ಮಾರನೊಂದು ಜಾತಿ. ಕಮ್ಮಾರನ ಮಗನಿಗೆ ಚಮ್ಮಾರನ ಕರ್ಮಗಳು ಆಗಲಾರವು. ತಂದೆ ತಾಯಿಗಳ ವೃತ್ತಿಯನ್ನು ಮಗನು ಅವಲಂಬಿಸದಿದ್ದರೆ ಅವರ ಉಪಕರಣಗಳೆಲ್ಲವೂ ವ್ಯರ್ಥವಾಗುವುವು. ಇದರಿಂದ ನಮ್ಮ ಹಿಂದೂ ನಾಗರಿಕಜೀವನವೇ ಛಿನ್ನ ಭಿನ್ನವಾಗುವುದು.

ಒಬ್ಬನಲ್ಲಿ ವರ್ಣವು ಹುಟ್ಟಿನಿಂದಲೇ ನಿರ್ಣೈಸಲ್ಪಡತಕ್ಕದ್ದು. ಅದರಲ್ಲಿಗುಣಕರ್ಮಗಳು ನ್ಯೂನವಿದ್ದರೆ ಅವನ್ನು ತುಂಬಬೇಕು; ಜನ್ಮ, ಗುಣ, ಕರ್ಮ, ಸ್ವಭಾವಗಳೆಲ್ಲವೂ ಇದ್ದರೆ ಅದು ಪೂರ್ಣವರ್ಣ. ಯಾವುದಾದರೂ ಕಡಿಮೆ ಇದ್ದರೆ ಅಪೂರ್ಣವರ್ಣ. ಗುಣಕರ್ಮಗಳನ್ನು ಬದಲಾಯಿಸುವುದು ಶಕ್ಯ. ಆದರೆ ಜನ್ಮ (ಶರೀರ) ವನ್ನು ಬದಲಾಯಿಸುವುದು ಶಕ್ಯವಿಲ್ಲ. ಗುಣಕ್ಕೆ ತಕ್ಕ ಕರ್ಮ, ಕರ್ಮಕ್ಕನುಗುಣವಾಗಿ ಸಂಸ್ಕಾರ; ಸಂಸ್ಕಾರದಂತೆ ಸ್ಮೃತಿ; ಮೃತ್ಯುಕಾಲದ ಸ್ಮೃತಿಯನ್ನನುಸರಿಸಿ ಜನ್ಮ. ಇದೇ ನಮ್ಮ ಹಿಂದೂಸಿದ್ಧಾಂತದ ರಹಸ್ಯ.

ಜಾಬಾಲನಾದ ಸತ್ಯಕಾಮನು, ಅಗಸಗಿತ್ತಿಯ ಮಗ ವಸಿಷ್ಠ, ಶೂದ್ರಪುತ್ರ ನಾರದ ಇವರೆಲ್ಲ ಬ್ರಾಹ್ಮಣರಾಗಲಿಲ್ಲವೆ? ಅಂದರೆ ಅವರೆಲ್ಲರೂ ಗುಣಕರ್ಮಗಳಿಂದ ಅಪೂರ್ವ ಬ್ರಾಹ್ಮಣರಾದರೂ ಜನ್ಮದಿಂದಲೂ ಬ್ರಾಹ್ಮಣ ಶರೀರ ದೊರಕಿಸಿಕೊಂಡಾಗಲೇ ಪೂರ್ಣ ಬ್ರಾಹ್ಮಣರಾದರು. ಯಾವನೊಬ್ಬನಿಗೆ ಅಪವಾದ ರೂಪದಲ್ಲಿ ತನ್ನ ವಂಶದ ಕೆಲಸದಲ್ಲಿ ಪ್ರವೃತ್ತಿ ಇಲ್ಲದೆ ಅನ್ಯರ ವೃತ್ತಿಯಲ್ಲಿ ಪ್ರವೃತ್ತಿಯುಂಟಾಗಬಹುದು. ಆದರೆ ಅಪವಾದವು ವ್ಯವಹರಿಸಲಿಕ್ಕೆ ಯೋಗ್ಯವಲ್ಲ.

## ನೀಚೋಚ್ಚ ಭಾವನೆಗಳ ಕಾರಣ

ಇಡೀ ಸಮಾಜದಲ್ಲೇ ಹೇಗೆ ಈ ಚತುರ್ವರ್ಣ್ಯ ವ್ಯವಸ್ಥೆಯು ಸಹಜಸಿದ್ಧವೋ ಹಾಗೆಯೇ ಪ್ರತಿಯೊಂದು ವರ್ಣದ ಗುಂಪಿನೊಳಗೂ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಈ ನಾಲ್ಕು ವರ್ಣದ ಗುಣಕರ್ಮಗಳು ಸಹಜವಾಗಿವೆ. ಕೃಷಿ, ಗೋರಕ್ಷೆ, ವಾಣಿಜ್ಯ, ಸೇವೆ ಎಂಬ ವೈಶ್ಯ ಶೂದ್ರಭಾವಗಳು ಸ್ತ್ರೀಯಲ್ಲಿ ಸಹಜವಾಗಿದ್ದಂತೆಯೇ ಶಮ, ದಮ, ಜ್ಞಾನ ತಪಸ್ಸು, ಶೌರ್ಯ, ಧೈರ್ಯ, ಪ್ರಭುತ್ವ, ಶಕ್ತಿ ಮುಂತಾದ ಬ್ರಾಹ್ಮಣಕ್ಷತ್ರಿಯ ಗುಣಗಳು ಪುರುಷನಿಗೆ ಸಹಜವಾಗಿವೆ.

ಇನ್ನು ವಿಷಯಜ್ಞಾನ, ಕಷ್ಟನಿವಾರಣೆಯ ಪ್ರಯತ್ನ, ಸುಖಕ್ಕಾಗಿ ಸಂಗ್ರಹ, ಶರೀರಾವಯವಗಳ ಪರಸ್ಪರ ಸಹಾನುಭೂತಿ ಮುಂತಾದ ನಾಲ್ಕೂ ವರ್ಣದ ಗುಣಕರ್ಮಗಳು ಪ್ರತಿಯೊಬ್ಬ (ಸ್ತ್ರೀ-ಪುರುಷ) ವ್ಯಕ್ತಿಯಲ್ಲೂ ಕಂಡು ಬರುವುದು.

ಹೀಗೆ ವ್ಯಕ್ತಿಯಿಂದ ಸಮಾಜದ ವರೆಗೂ ಇರುವ ಚಾತುರ್ವರ್ಣ್ಯ ವ್ಯವಸ್ಥೆಯನ್ನು ವೇದದಿಂದ ಹಿಡಿದು ಎಲ್ಲ ಹಿಂದೂಶಾಸ್ತ್ರ ಪುರಾಣಗಳೂ ಜನ್ಮದಿಂದಲೇ ಸಿದ್ಧಪಡಿಸುತ್ತಿದ್ದು, ಇತಿಹಾಸವೂ ಇಂದಿನ ವ್ಯವಹಾರವೂ ಅದಕ್ಕನುಗುಣವಾಗಿಯೇ ಇರುವಾಗ ಅದನ್ನು ಯಾರು ಯಾವಾಗ ಬೇಕಾದರೂ ಅನುಸರಿಸಿ ಶೂದ್ರ ಬ್ರಾಹ್ಮಣನಾಗಬಹುದು ಎಂದುಹಾರಿಸಿ ಬಿಡುವಷ್ಟು ಸುಲಭವಲ್ಲ.

ಜನ್ಮದಿಂದಲೇ ವರ್ಣವ್ಯವಸ್ಥೆ ಇರುವುದರಿಂದ ತೊಂದರೆಯಾದರೂ ಏನು? ಉಚ್ಚನೀಚಭಾವನೆಗಳುತ್ಪನ್ನವಾಗಬಹುದೆಂತಲೋ? ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ದುರ್ಭಾವನೆಗೆ ಅವಕಾಶವೇ ಇಲ್ಲ. ಸಮಾಜದಲ್ಲಿ ನಾಲ್ಕೂ ವರ್ಣಗಳೂ ಪರಸ್ಪರ ಸಾಪೇಕ್ಷಕ ಮಾತ್ರವಲ್ಲ, ಆಯಾ ಸ್ಥಾನದಲ್ಲಿ ಆಯಾವರ್ಣ ಶ್ರೇಷ್ಠವೂ ಹೌದು. ಉಚ್ಚ-ನೀಚ ಭಾವನೆಗೆಡೆಗೊಡುವ ಸನ್ನಿವೇಶಗಳು ಬೇಕಾದಷ್ಟಿವೆ. ಬಡವ ಶ್ರೀಮಂತ, ದಡ್ಡ-ಬುದ್ಧಿವಂತ ಸುರೂಪಿ-ಕುರೂಪಿ, ಶಕ್ತ- ಅಶಕ್ತ, ಮಾಂಸಾಹಾರಿ-ಸಸ್ಯಾಹಾರಿ, ಸತ್ಕರ್ಮ ದುಷ್ಕರ್ಮ ಹೀಗೆ ಲೆಕ್ಕವಿಲ್ಲದಷ್ಟು ಉಚ್ಚನೀಚ ಭಾವನೆಗಳನ್ನೆಲ್ಲಾ ಹೊಡೆದೋಡಿಸಿ ಐಕ್ಯ ಮಾಡುವುದು ಹೇಗೆ? ಪ್ರಧಾನವಾಗಿ ಮಾನವನ ಅಂತಃಕರಣದಲ್ಲಿ ಹುದುಗಿರುವ ಕಾಮ. ಕ್ರೋಧ. ಮೋಹ. ಮದ. ಮತ್ಸರಗಳೆಂಬ ಅಜ್ಞಾನದ ವಂಶಪರಂಪರೆಯೇ ಎಲ್ಲ ಅನರ್ಥಗಳಿಗೆ ಮೂಲ ಕಾರಣವಲ್ಲದೆ ಜಾತಿ, ಕೋಮು, ವರ್ಣಗಳಲ್ಲ.

ಹಿಂದೂಗಳಲ್ಲಿ ನೂರಾರು ಕೋಮುಗಳಿರುವುದರಿಂದಲೇ ಇಷ್ಟೆಲ್ಲ ಒಡಕುಗಳಿವೆಯೆಂದು ಉಸುರುವ ಪಾಶ್ಚಾತ್ಯರ ಅಭಿಪ್ರಾಯವನ್ನೇ ನಾವೂ ಕಣ್ಣು ಮುಚ್ಚಿಕೊಂಡು ಅನುಸರಿಸುವುದು ಸರಿಯಲ್ಲ. ನಮ್ಮಷ್ಟು ಜಾತಿ ಕೋಮುಗಳ ಭೇದವಿಲ್ಲದ ಪಾಶ್ಚಾತ್ಯರಲ್ಲೇಕೆ ಇಂದು ಅಭೂತಪೂರ್ವವಾದ ವೈಮನಸ್ಯ ಒಡಕುಗಳು ಕಂಡು ಬರುತ್ತಿವೆ?

ಹೃದಯ ಒಂದಾದಾಗ ಹೊರಗಿನ ಸಂಪ್ರದಾಯಗಳಿಂದೇನೂ ತೊಂದರೆಯಿಲ್ಲ. ಸಾವಿರಾರು ವರ್ಷಗಳಿಂದಲೂ ಮಾಂಸಾಹಾರಿಯಾದ ಶೂದ್ರನೂ ಸಸ್ಯಾಹಾರಿಯಾದ ಬ್ರಾಹ್ಮಣನೂ ಧನಾಢ್ಯನಾದ ವೈಶ್ಯನೂ ಪ್ರಭುವಾಗಿ ಆಳುವ ಕ್ಷತ್ರಿಯನೂ ಕೂಡಿ ಬಾಳುತ್ತ ಬಂದಿದ್ದಾರೆ. ಈಚೆಗಿನ ಪಾಶ್ಚಾತ್ಯರ ಕಟ್ಟುಕತೆಗಳನ್ನು ಬಿಟ್ಟರೆ ಹಿಂದುಸ್ತಾನವು ಜಾತಿಜಾತಿಗಳೊಳಗೆ ಬಡಿದಾಡಿದ ದೃಷ್ಟಾಂತಗಳೆಲ್ಲೂ ಇಲ್ಲ. ಈಗ ಅವರ ಸಂಸರ್ಗ ಪ್ರಭಾವದಿಂದ ಕೋಮುವಾರು ಭಾವನೆಯನ್ನು ಹೊಡೆದೋಡಿಸಬೇಕೆಂಬ ಗದ್ದಲವು ಅದರ ಕಲ್ಪನೆಯೇ ಇಲ್ಲದ ಜನತೆಯನ್ನು ಉದ್ವಿಗ್ನಗೊಳಿಸುತ್ತಿದೆ. ವಸ್ತುತಃ ಅಸ್ತಿತ್ವವೇ ಇಲ್ಲದ ಈ ಭಾವನೆಗಿಂದು ಕಲ್ಪಿತ ಅಸ್ತಿತ್ವ ಉಂಟಾಗಿದೆ.

–ವೈದ್ಯ, ಗ. ಸು. ಪಾಟೀಲ ಬರಿಗೆ.

# ಹೆಂಗಸರೂ ಅಡಿಗೆಯ ಮನೆಯೂ

ಸುಧಾರಕರೆಂದು ಕರೆದುಕೊಳ್ಳುವ ಸ್ತ್ರೀವಾದಿಗಳು ಅಡಿಗೆಯ ಮನೆಯಿಂದ ಸ್ತ್ರೀಯನ್ನು ಮುಕ್ತಮಾಡುವೆವೆಂದು ಹೊಡೆಯುವ ತಿರುಬೊಬ್ಬೆಗೆ ಇಂದು ಮಿತಿಯಿಲ್ಲವಾಗಿದೆ. ಅಮೇರಿಕದ ಕೆಲ ಮನಃಶಾಸ್ತ್ರಜ್ಞರೆನಿಸಿಕೊಂಬ ಮರುಳುಗಳಂತೆ ಇವರಾದರೂ ವಾಕ್ಯವೇದ ವಿಶಾರದರಾಗಿರುವರಲ್ಲದೆ, (ಬಹುಸಂಖ್ಯರು ಬಡವರಿರುವುದರಿಂದ) ಒಂದು ಬಡ ಕುಟುಂಬ ಶಾಂತವಾಗಿ ಬದುಕಬೇಕಾದರೆ ಅಲ್ಲಿಯ ಸ್ತ್ರೀ-ಪುರುಷರು ಶ್ರಮವಿಭಜನೆಯನ್ನು ತಂತಮ್ಮ ಶಾರೀರಿಕ ಮತ್ತು ಮಾನಸಿಕ ಶಕ್ತಿಗಳಿಗನುಗುಣವಾಗಿ ಹೇಗೆ ಮಾಡಿಕೊಳ್ಳುವದು ಅಗತ್ಯ, ಸಾಧ್ಯ, ಲಾಭಕರ ಎಂಬುದರತ್ತ ಎಳ್ಳಷ್ಟೂ ಲಕ್ಷ್ಯ ಹಾಕುತ್ತಿಲ್ಲ. ಇಂದು ಮನೋವಿಜ್ಞಾನಿಗಳು ತೀರ್ಮಾನಿಸಿರುವರಂತೆ ರೋಗಾಣುಗಳ ಪ್ರತಿಭಟನೆಯಲ್ಲಿ, ಚಿಲ್ಲರೆ ಕೆಲಸಗಳಲ್ಲಿ ಮಾನಸಿಕ ಮತ್ತು ದೈಹಿಕ ಸಹನೆಯಿಂದ ನಡೆದುಕೊಳ್ಳುವುದರಲ್ಲಿ ಗಂಡಸರಿಗಿಂತ ಹೆಂಗಸರೇ ಹೆಚ್ಚು ಶಕ್ತರು. ಅದರಿಂದಲೇ ಇಡೀ ಜಗತ್ತಿನಲ್ಲಿ ಇಂದೂ ಶುಶ್ರೂಷೆ, ಅಡಿಗೆ, ಗೃಹಾದಿಗಳ ವ್ಯವಸ್ಥೆ, ಶಿಶುಸಂಗೋಪನ ಮುಂತಾದ ಕೆಲಸಗಳನ್ನು ಮನೆಯಲ್ಲಾಗಲಿ, ಹೊರಗೆ ಸಾರ್ವಜನಿಕ ಸಂಸ್ಥೆಗಳಲ್ಲಿ 'ಸ್ವತಂತ್ರ'ವಾಗಿಯಾಗಲಿ, ಮಾಡಲು ಉತ್ಸಾಹದಿಂದ ಕೈಕೊಳ್ಳುವವರು ಹೆಂಗಸರೇ ಎಂಬುದು ಲೋಕಾನುಭವ ಸಂಪನ್ನರಿಗೆ ಅರಿಯದ ಸಂಗತಿಯಲ್ಲ. ಅಲ್ಲದೆ, ಅಡಿಗೆಯ ಮನೆಯ ಕೆಲಸ ಹೀನವಾದರೆ ಅದು ಹೆಂಗಸಿಗೆಮಾತ್ರವಲ್ಲ ಗಂಡಸಿಗೂ ಹೀನವಾದೀತು. ಆಗ ಆ ಕೆಲಸವನ್ನು ಇಬ್ಬರೂ ಬಿಟ್ಟರೆ ಮಾನವ ಸಮಾಜ ಬದುಕುವ ಮಾರ್ಗವೇನೆಂಬುದನ್ನು ಸ್ತ್ರೀವಾದಿಗಳು ಹೇಳಲಿಲ್ಲ, ಹೇಳಲಾರರು.

ನಮ್ಮ ಹೆಂಗಸರ ಅಜ್ಞಾನ ಕೇವಲ ನಿರಕ್ಷರತೆಯಲ್ಲಿ ಮಾತ್ರವಲ್ಲದೆ ಅಡಿಗೆ ಮತ್ತು ಶುಶ್ರೂಷೆ ಚಿಕಿತ್ಸೆಗಳಲ್ಲಿಯೂ ಅಪಾರವಾಗಿರುವುದೇ ಮನೆಯಲ್ಲಿ ರೋಗಾದಿಗಳು, ಮರಣಗಳು ಅನವಶ್ಯಕವಾಗಿ, ನಿವಾರ್ಯವಿದ್ದರೂ ನಿವಾರಿಸಲ್ಪಡದೆ, ಹೆಚ್ಚುತ್ತಿವೆ. ಕೇವಲ ಸಾಕ್ಷರತೆಯಿಂದ ವಿದ್ಯೆ ಲಭಿಸದು, ಅದೊಂದೇ ಶಿಕ್ಷಣಸಾಧನವಲ್ಲ. ಹಿಂದಿನ ಹೆಣ್ಣುಮಕ್ಕಳಲ್ಲಿ ಹಲವರು ಅನಕ್ಷರರಿದ್ದರೂ "ಸಾಭಾರ್ಯಾ ಯಾ ಗೃಹೇ ದಕ್ಷಾ" ಎಂಬ ಲಕ್ಷಣಕ್ಕೆ ಸರಿಯಾಗಿ ಬಾಳುತ್ತಿದ್ದುದುಂಟು. ಸಂಧಿಕಾಲವಾದ ಇಂದು ಈ ಹಳೆಯ ಪರಂಪರೆಯ ಪಾಕವಿಧಾನ ಮತ್ತು ಮೂಲಿಕಾಜ್ಞಾನಗಳೂ ಅವರಿಗಿಲ್ಲ, ಅವುಗಳ ಹೊಸ ಕಾಲದ ರೀತಿಗಳೂ ಗೊತ್ತಿಲ್ಲ. ಹೀಗಾಗಿ ಇಂದಿನ ಸಾಮಾನ್ಯ ಸುಶಿಕ್ಷಿತರೆಂದು ಹೇಳಿಕೊಳ್ಳುವವರ ಕುಟುಂಬದಿಂದ ಗಂಡನಮನೆಗೆ ಹೋದ ಹೊಸ ಹೆಣ್ಣು ಕೇವಲ ಹುಡುಗಾಟಿಕೆಯ ಅಪ್ರಯೋಜಕತೆಯಿಂದ ಮಾತ್ರ ಕಂಗೊಳಿಸುವಳು. ಅಲಾಭಕರವಾದ ಕಸೂತಿ, ಹಾಡು ಮತ್ತು ಇತರ ಶೋಕೀಕಲೆಗಳಲ್ಲಿ ಅಸಂಪೂರ್ಣ ಜ್ಞಾನ ಪಡೆದ ಇಂಥವರು ಸ್ತ್ರೀವಾದಿಗಳ ಅಪಪ್ರಚಾರಕ್ಕೆ ಕೆಲ ವೇಳೆ ಬಲಿಯಾಗಿ ಅತೃಪ್ತರೂ ವಕ್ರಬುದ್ಧಿಯವರೂ ಆಗಿ ಕುಟುಂಬದ ಶಾಂತಿಗೆ ಭಂಗತರುವುದು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಕೆಲವೆಡೆ ಕಂಡು ಬರತ್ತದೆ. ಕರ್ತವ್ಯದಕ್ಷತೆಯಿಲ್ಲದೆ ಸುಖಾಪೇಕ್ಷಿಗಳಾಗಿ ಗೊಣಗುವ ಈ ಬುದ್ಧಿಯಿಂದ ತಮ್ಮ ಗಂಡನ ಮತ್ತು ಮಕ್ಕಳ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಮೃತ್ಯುಪ್ರಾಯರಾಗಿ ಪರಿಣಮಿಸುವ ಈ ನವನಾಗರಿಕೆಯರ ಹಾವಳಿ ಚಿಕ್ಕ ಪಟ್ಟಣ ಮತ್ತು ನಮ್ಮ ಅಸಂಖ್ಯ ಹಳ್ಳಿಗಳತ್ತ ಹರಿಯದಿರುವುದು ಪುಣ್ಯವೆಂದೇ ಹೇಳಬೇಕು.

ನೌಕರಿ ಮಾಡುವದು ಸ್ವಾತಂತ್ರ್ಯವೆಂದೂ ಗಂಡನೊಡನೆ ಗೃಹಕರ್ಮನಿರತಳಾಗಿ ಬಾಳುವದು ದಾಸ್ಯವೆಂದೂ ಬೋಧಿಸುವ ಸ್ತ್ರೀ ಪುರುಷರ ಮನೋವಿಕಾರಕ್ಕೆ ಹೋಲಿಕೆಯೇ ಇಲ್ಲ. ಹೃದಯಾಧಿದೇವತೆಯ ಶುಶ್ರೂಷೆ ಉಪಚಾರಗಳು ದಾಸ್ಯವೆಂದು ಮತ್ತು ಪರಕೀಯರ ಸೇವೆ ಸ್ವಾತಂತ್ರ್ಯವೆಂದು ಬುದ್ಧಿಯಿರುವ ಯಾವ ಹೆಂಗಸೂ ತಿಳಿದುಕೊಳ್ಳಲಾರಳು, ತಿಳಿದುಕೊಂಡಿಲ್ಲ. ಪ್ರತಿಯೊಂದು ತತ್ವಕ್ಕೂ ನಿಯಮಕ್ಕೂ ವ್ಯವಸ್ಥೆಗೂ ಅಪವಾದಗಳಿರುವಂತೆ, ಅವುಗಳಲ್ಲಿ ಕೆಲ ನ್ಯೂನತೆಗಳಿರುವಂತೆ ನಮ್ಮ ಗೃಹವ್ಯವಸ್ಥೆಯಲ್ಲೂ ಅಲ್ಪಸಂಖ್ಯವಾದ ವಿಶಿಷ್ಟ ಸನ್ನಿವೇಶಗಳಲ್ಲಿ ಹೆಂಗಸಿಗೆ (ಮತ್ತು ಗಂಡಸಿಗೂ) ತನ್ನ ಆತ್ಮ ವಿಕಾಸಕ್ಕೆ ಪರಸ್ಪರ ದೋಷಗಳಿಂದ ಅಡ್ಡಿಯುಂಟಾಗಬಹುದು. ಆದರೆ ಅಪವಾದವೆಂದೂ ನಿಯಮವಾಗಲಾರದು; ದೋಷ

(೧೨ನೇ ಪುಟಕ್ಕೆ)

# ...ತಕ ಮೂಲಶಿಕ್ಷಣ

...ಣ ಸಲಹೆ ಸವಿ

...ಜೀವನವನ್ನು
...ಯೋಜ
...ಅವ್ಯವಚ್ಛೇದವೂ

...ಭಾರತೀಯ ಪರಿ
...ವಾದ ಆಚರಣೆ
...ವಾಗುವ ಶೈಕ್ಷ
...ಸಂಪೂರ್ಣವಾಗಿ

...ಯ ಯೋಜನೆ
...ವರದಿ]

...ಅದು ಹೆಚ್ಚಾಗಿ
...ಲ್ಲವೆ ಉತ್ಪಾದಕ
...ಹುದು, ಆದರೆ
...ರುವಂತೆ ಶಿಕ್ಷಣದ
...ಲವಲ್ಲ, ಉತ್ಪಾ

...ಮಿತಿಯ ವರದಿ

...ದ ಸಂಖ್ಯೆ ೬—
...ಯುವ ತತ್ವದ
...ರ್ಧ ಯೋಜ
...ದಿಯಲ್ಲಿ ಮಾಡಿದ
...ವಾಗಿ ಒಪ್ಪಿ
...ಳತರಗತಿಗಳಲ್ಲಿ
...ಒಂದು ಮೂಲ
...ಕ್ಕದ್ದೂ ಅಗಿರ
...ಉತ್ಪಾದನೆಯು
...ಮತ್ತು ಆದರಿಂದ
...ನ್ನು ನಡೆಸಲು

...ಆವರಣ ಮತ್ತು
...ರ್ಧ ಯೋಜನೆ
...ನದ ಮಾಧ್ಯಮ
...ಗಳಾಗಕೂಡದು;
...ಯುಗಳಾಗಿರುವದ
...ಗಳನ್ನು ಹೊಂದಿಸಿ
...ಟ್ಟುಕೊಳ್ಳಬೇಕು.
...ವರ್ಷದಲ್ಲಿ ಇಂಗ್ಲೀ
...ಡರಿ ಶಾಲೆಗಳಲ್ಲಿ
...ಮೂಲಶಿಕ್ಷಣ ಶಾಲೆ
...ಕು.

...ನ್ನು ನೋಡಿರಿ:
...ಕ್ಷಣ ಶಾಲೆಗಳಲ್ಲಿ
...ಗ್ಯತೆಯ ಬಗ್ಗೂ
...ಲ್ಲ; ಆದರೆ ಕೆಲ
...ರ್ಜನಿಕರ ಬೇಡಿಕೆ
...ಈ ಪ್ರಕರಣದಲ್ಲಿ
...ವದನ್ನು ಪ್ರಾಂತಿಕ
...ಬೇಕು. (೨ ನೆಯ
...ಪುರಸ್ಕಾರ).
...ಸಂಖ್ಯೆ ೧೩-ಮೂಲ
...ಗ್ಲೀಷನ್ನು ಐಚ್ಛಿಕ
...(೧ ನೆಯ ಮೂಲ
...ರ).

...ಇಯತ್ತೆಗಳಲ್ಲಿ
...ಭ್ಯಾಸಕ್ಕೆ ಪ್ರವೇಶ
...ವಾದ ಪದ್ಧತಿಯರ

...ಹುನ್ನು ನೋಡಿರಿ:
...ಖ್ಯೆ ೩— ಐದನೆಯ
... ವರ್ಷ ವಯ
... ಶಾಲೆಯಿಂದ
...ಳಿಗೆ ಹೋಗಲು
...ಕೊಡಬೇಕು.
...ಕಾಯ್ದು
...ವೇಳೆಗೆ ೨
...-೫ ವರ್ಷಗಳ ವರೆ
...ಹಿರಿವರ್ಗ ಮತ್ತು
...ಮೇಲಿನ ಅಥವಾ

...ಪದ್ಧತಿಯ ಯಾವ
...ಆಗಲಿ, ಮಕ್ಕಳು
...ಡೆಯುವ ಮೇಲಿನ

ಸಾಮಾನ್ಯ ಮೂಲಶಿಕ್ಷಣ ಶಾಲೆಗಳಿಂದ ದೃಷ್ಟಿಯಲ್ಲಿಯೂ ಗುರಿಯಲ್ಲಿಯೂ ಹೈಸ್ಕೂಲಗಳು ಭಿನ್ನ ಘಟಕಗಳೆಂದು ತಿಳಿಯಲ್ಪಡಬೇಕು.

ಪು. ೨೧: ನೂರರಲ್ಲಿ ೫೪ ವಿದ್ಯಾರ್ಥಿಗಳಿಗೆ ಅರ್ಧ ಅಥವಾ ಪೂರ್ಣ "ಫ್ರೀಶಿಪ್" ಕೊಡಬೇಕಾಗುವುದು.

೫. ಕೆಳಗಿನ ಮೂಲಶಿಕ್ಷಣಶಾಲೆಯಲ್ಲಿ ೫ ನೆಯ ಇಯತ್ತೆ ಓದಿದ ಬಳಿಕ ಮಕ್ಕಳನ್ನು ಅವುಗಳ ಸಾಮರ್ಥ್ಯ, ಹೃತ್ಪ್ರವೃತ್ತಿ ಮತ್ತು ಸಾಮಾನ್ಯ ಬುದ್ಧಿಮತ್ತೆಗಳ ಮೇಲಿಂದ ಹೈಸ್ಕೂಲಿಗೆ ಇಲ್ಲವೆ ಮೇಲಿನ ಮೂಲಶಿಕ್ಷಣ ಶಾಲೆಗೆ ಕಳಿಸಬೇಕು.

ಕೇಂ. . ಶಿ. ಸ. ಸ. ವರದಿಯನ್ನು ನೋಡಿರಿ: ಸೆಕಂಡರಿ ವಿದ್ಯಾಭ್ಯಾಸ ಬಡಮಕ್ಕಳಿಗಿಲ್ಲದಾಗದಂತೆ ನೋಡಿಕೊಳ್ಳಲು ದ್ವೈಧೀಕರಣಕ್ಕೆ ಈ ಕೆಳಗಿನ ಕರಾರುಗಳನ್ನು ಹಾಕಲಾಗಿದೆ:

ಅ) ಕೆಳ ಮೂಲಶಿಕ್ಷಣಶಾಲೆಯ ೫ ವರ್ಷಗಳ ಅಭ್ಯಾಸ ಮುಗಿದೊಡನೆ ಒಂದು ತಾರಕ ಪರೀಕ್ಷೆಯನ್ನು ಇಡುವುದು.

" ಹೈಸ್ಕೂಲಿನ ಶಿಕ್ಷಣಾವಧಿಯು ಮಾಧ್ಯಮಿಕ ಅವಸ್ಥೆಗಳನ್ನು ಒಳಗೊಳ್ಳುತ್ತದೆ." ಪ್ರೈಮರಿ ಶಾಖೆಗಳನ್ನು ಸಂಪೂರ್ಣವಾಗಿ ಭಿನ್ನ ಘಟಕಗಳೆಂದು ತಿಳಿದು ಆ ಪ್ರಕಾರ ಸಂಘಟಿಸಬೇಕು.

ಆ) ಪರೀಕ್ಷೆಯಲ್ಲಿ ಯೋಗ್ಯರೆನಿಸಿಕೊಂಡವರು ಮಾತ್ರ ಸೆಕಂಡರಿ ಶಾಲೆಗೆ ಪ್ರವೇಶಿಸಲು ಅರ್ಹರು.

ಪು. ೧೫: ಹೈಸ್ಕೂಲು ಶಿಕ್ಷಣ ಅದಕ್ಕಾಗಿಯೇ ಅಲ್ಲದಿದ್ದರೂ ಸಮಾಜಕ್ಕಾಗಿ ಉತ್ತಮ ವರ್ಗದ ವಿದ್ಯಾವಂತರನ್ನು ನಿರ್ಮಿಸುವುದು ಉಚ್ಚ ಶಿಕ್ಷಣದ ಗುರಿ. ಅದುದರಿಂದ ಕೆಳ ಮೂಲ ಶಿಕ್ಷಣಶಾಲೆಯ ಅವಸ್ಥೆಯನ್ನು ಮುಗಿಸಿ ಉಚ್ಚಶಿಕ್ಷಣ ತೆಗೆದುಕೊಳ್ಳಹೋಗುವಾಗಿನ ಪರೀಕ್ಷೆಯ ತಾರಕತತ್ವ ಅತಿ ಮುಖ್ಯವಾದುದು. ಸದ್ಯ: ತಾಯ್ತಂದೆಗಳು ಅಥವಾ ರಕ್ಷಕರು ಫೀ ಕೊಡಬಲ್ಲರೋ ಹೇಗೆ ಎಂಬುದರ ಮೇಲೆಯೇ ಹೈಸ್ಕೂಲು ಪ್ರವೇಶವು ನಿರ್ಧರಿಸಲ್ಪಡುತ್ತದೆ.

(ಇ) ಬಡವರಾಗಿದ್ದು ಯೋಗ್ಯತೆಯುಳ್ಳ ಮಕ್ಕಳಿಗೆ ನೂರಕ್ಕೆ ೫೦ ರಷ್ಟು "ಫ್ರೀಶಿಪ್" ಕೊಡಬೇಕು.

ಉತ್ತೀರ್ಣರಾಗುವುದರ ಮೇಲಿಂದ ಮಾತ್ರ ಮೇಲಿನ ಶಾಲೆಗೆ ಸೇರಿಸಿಕೊಳ್ಳುವುದಾದರೆ ಸಾಕಷ್ಟು ಹಣಕಾಸಿಲ್ಲದ ಮಕ್ಕಳಿಗೆ "ಫ್ರೀಶಿಪ್" ಅಲ್ಲದೆ ಅಹಾರ ಪುಸ್ತಕಾದಿಗಳ ವೆಚ್ಚಕ್ಕೂ ಕೊಡಬೇಕಾಗುವುದು. ಕೆಲಕಾಲದ ಮೇಲೆ ಮೇಲಿನ ಮೂಲಶಿಕ್ಷಣ ಶಾಲೆಯಿಂದ ಮಕ್ಕಳನ್ನು ಹೈಸ್ಕೂಲಿಗೆ ವರ್ಗಾಂತರಿಸುವ ಅನುಕೂಲಗಳನ್ನು ಮಾಡಿಕೊಡಬೇಕು; ಅದರಲ್ಲೂ ಆ ಮಕ್ಕಳು ತಡವಾಗಿ ಬುದ್ಧಿಪರಿಪಾಕ ಹೊಂದುವ ಲಕ್ಷಣವನ್ನು ತೋರಿದಾಗ ಅಂಥ ಅನುಕೂಲ್ಯಗಳ ಅಗತ್ಯ ಹೆಚ್ಚು.

(ಈ) ಮೇರೆಗೆ ಉತ್ತೀರ್ಣರಾಗದ ಮಕ್ಕಳು ಸೆಕಂಡರಿ ಶಾಲೆಗಳಿಗೆ ಸೇರಬೇಕಾದರೆ ಸಂಪೂರ್ಣ ವೆಚ್ಚದ ಫೀ ಕೊಡಬೇಕಾಗುವುದು. ಈ ಮಕ್ಕಳ ಮೇಲಿಂದ ಸರಕಾರ ಯಾವ ಗ್ರಾಂಟನ್ನೂ ಕೊಡುವುದಿಲ್ಲ.

ಆ ಮಟ್ಟವನ್ನು ಮುಟ್ಟಲಾರದ ಮಕ್ಕಳ ತಾಯ್ತಂದೆಗಳು "ಕೊಟ್ಟ ಶಿಕ್ಷಣದ ಪೂರ್ಣ ವೆಚ್ಚವನ್ನು ಕೊಡುವುದಾದರೆ" ತಮ್ಮ ಮಕ್ಕಳ ಶಿಕ್ಷಣವನ್ನು ಅಲ್ಲೇ ಮುಂದೆ ಸಾಗಿಸಿಕೊಂಡು ಹೋಗಬಹುದು.

(ಉ) ತಡವಾಗಿ ಬುದ್ಧಿಪರಿಪಾಕ ಹೊಂದುವ ಮಕ್ಕಳಿಗೆ ಪರೀಕ್ಷೆಯ ಒಂದು ವ್ಯವಸ್ಥೆ ಮತ್ತು ಸುಲಭ ವರ್ಗಾಂತರ ಇವನ್ನು ಅಪ್ಪರ್ ಪ್ರೈಮರಿ ವಿದ್ಯಾಭ್ಯಾಸ ಮುಗಿದ ಅನಂತರ ಮಾಡಲಾಗುವುದು. ಆದರಿಂದ ಈ ಮಕ್ಕಳಿಗೂ ಸಮಾನಾವಕಾಶದ ಸಂಪೂರ್ಣ ಲಾಭ ದೊರಕುವಂತಾಗುವುದು.

ಮೂಲ ಶಿಕ್ಷಣ ಶಾಲೆಯ ಪೂರ್ಣ ಶಿಕ್ಷಣವನ್ನು ಪಡೆದ ನಂತರ ಅಂದರೆ ೮ ನೆಯ ಇಯತ್ತೆಯ ಬಳಿಕ ತಮ್ಮ ಅಭ್ಯಾಸವನ್ನು ಮುಂದೆ ಸಾಗಿಸಿಕೊಂಡು ಹೋಗಲು ನಿರ್ಧರಿಸಿದ ಮಕ್ಕಳಿಗೆ ಈ ಶಾಲೆಗಳಲ್ಲಿ ವಿಶೇಷ ವ್ಯವಸ್ಥೆಗಳನ್ನು ಮಾಡಬೇಕಾಗುತ್ತದೆ.

೬ ಜೀವನದತ್ತ ಮತ್ತು ಶ್ರಮಕಾರ್ಯದತ್ತ ನೋಡುವ ಬಗೆ ಮುಂತಾದವು ಅಲ್ಲಿಲ್ಲ.

## ರೂಪರಂಗ

### ಕಾಜಲ್

"ರತನ್ ಪಿಕ್ಚರ್ಸಿನ" ತಯಾರಿಕೆಯಾದ 'ಕಾಜಲ್' ಈಗ ಹುಬ್ಬಳ್ಳಿಯ ದರ್ಶನೀಯವಾದ "ಸುದರ್ಶನ" ರಂಗವನ್ನು ಹೊಕ್ಕಿದೆ. ಸುರಯ್ಯಾ, ವಾಸ್ತಿ, ಗೋಪರು ತಾರೆಯರು. ಶ್ರೀ ಎಂ. ಸಾದಿಕ್ ಇವರು ದಿಗ್ದರ್ಶಕರು.

ನ್ಯಾಯಾಧೀಶನಿಗೊಬ್ಬ ಮಗ. ಅಧುನಿಕ ವಿದ್ಯಾಭ್ಯಾಸ ಪಡೆದ ಅತನು ಅಧುನಿಕ ದುರ್ಬಲ ಮನಸ್ಕತೆಯನ್ನೂ ಚೆನ್ನಾಗಿಬೆಳೆಸಿಕೊಂಡವನು.

" I did but see her passing by
And yet I love her till I die–
ಒಮ್ಮೆಯೇ ನಾನಾಕೆಯನ್ನು ನೋಡಿದೆನು.
ಆದರೂ ಮರಣಂಬರಂ ಪ್ರೀತಿಸುವೆನು"

ಎಂಬ ಜಾತಿಯ ಸ್ತ್ರೀಭಕ್ತ ಕಥಾನಾಯಕನಾದ ಅತನು ಒಮ್ಮೆ ಕಂಡ ಒಬ್ಬ ಕುಣಿತದಾಕೆಗೆ ಮರುಳಾಗಿ, ತಂದೆ ಬೇರೆಯ ಯೋಗ್ಯ ಹುಡುಗಿಯನ್ನು ಗೊತ್ತುಮಾಡಿದ್ದನ್ನು ಬಿಟ್ಟು ಅವಳನ್ನೇ ಹಟದಿಂದ ಮದುವೆಯಾದನು. ತಂದೆ ಕ್ರುದ್ಧನಾಗಿ ಅತನ ಮಗತನವನ್ನು ತನ್ನ ಮೃತ್ಯುಪತ್ರದಲ್ಲಿ ತೆಗೆದುಹಾಕಿ ದತ್ತಕ್ಕೊಬ್ಬ ಹೊಸಬನನ್ನು ತೆಗೆದುಕೊಂಡು ಗೊತ್ತುಮಾಡಿದ ಹುಡುಗಿಯನ್ನು ಅವನಿಗೆ ಮದುವೆಮಾಡಲಣಿಯಾದಾಗ ಈ ಸಮಯಸ್ಫೂರ್ತಿಯ ಅನ್ಯಾಯಾಧೀಶನು ಆ ಮದುಮಗನನ್ನು ಕೊಲೆ ಮಾಡಿದನು. ಆ ಚಿಂತೆಯಿಂದ ತಂದೆ ದಿವಂಗತನಾದನು. ಸಾಯುವಾಗ ಅವನು ಕೊಲೆಗಡಕನನ್ನು ಕುರಿತು 'ನೀನು ತಂದೆಗೂ ಸಮಾಜಕ್ಕೂ ಅಪರಾಧಿಯಾಗಿರುವೆ' ಎಂದು ನುಡಿದು ಸತ್ತನು.

ಕುಣಿತದಾಕೆಯ ಹೊಟ್ಟೆಯಲ್ಲಿ ಈ ಧೀರೋದ್ಧತ ಕಥಾನಾಯಕನಿಗೆ ಒಂದು ಗಂಡು ಒಂದು ಹೆಣ್ಣು ಹೀಗೆ ಎರಡು ಮಕ್ಕಳು ಹುಟ್ಟಿದವು. ಈ ಮಧ್ಯೆ ಅಪ್ಪನ ಹೆಸರಿನಲ್ಲಿದ್ದ ಹಣಕ್ಕೆ ಚೆಕ್ಕು ಬರೆದುಕೊಟ್ಟು ಅದು ಸಿಂಧುವಾಗದೆ ಸಾಲಕ್ಕೆ ಬಿದ್ದು ಅವನು ಸುದೀರ್ಘ ಕಾರಾವಾಸಕ್ಕೆ ಗುರಿಯಾದನು. ಈ ಅವಮಾನಕರವಾದ ತಂದೆತನವನ್ನು ತಾಯಿ ಲೋಕಕ್ಕೂ ಮಕ್ಕಳಿಗೂ ತಿಳಿಯದಂತೆ ಮುಚ್ಚಿಟ್ಟಿದ್ದಳು. ಹುಡುಗ ಹುಡುಗಿಯರು ಯಥಾ ರೀತಿಯಿಂದ ಓದಿ ಬೆಳೆದು ದೊಡ್ಡವರಾದಾಗ ಹುಡುಗನಾದರೂ ತಂದೆಯ ರಸಿಕತೆಯನ್ನೇ ಅಮಲಿನಲ್ಲಿ ತರಲು ಅಣಿಯಾದನು; ಓರ್ವ ಕುಣಿತದಾಕೆಯನ್ನು ಮೋಹಿಸಿ ಮದುವೆ ಮಾಡಿಕೊಳ್ಳಹೋದನು. ಜೇಲಿನಿಂದ ಹೇಗೋ ಮುಕ್ತನಾಗಿದ್ದ ಅವನ ತಂದೆ ಆ ಅವಳಿದ೦ ಕಂಪೆನಿಯಲ್ಲೇ ಹಿಂಬಾಲವಾಗಿದ್ದು, ಅವನಿಗೆ ಈ ಮದುವೆಯ ಸುದ್ದಿ ತಿಳಿದು ಹೆಂಡತಿಯ ಹತ್ತಿರ ಬಂದು ತನಗೆ ಅಂಥ ಸಂಬಂಧ ಮೆಚ್ಚದೆಂದೂ ತಾನು ತಂದೆಯೆಂದು ಮಗನಿಗೆ ತಿಳಿಸಿ ಬುದ್ಧಿವಾದ ಹೇಳುವೆನೆಂದೂ ವಾದಿಸಿದನು. ಅದಕ್ಕೆ ಅವಳೂ ಅವಳ ಅಪ್ಪನೂ ಸಮ್ಮತಿಸಲಿಲ್ಲ ಮತ್ತು ಇವನು ತನ್ನ ಹಟದಂತೆ ತಿಳಿಸಲು ಸನ್ನದ್ಧನಾದಾಗ ಮಾವ ಇವನ ಗುಂಡಿಗೆಯನ್ನು ಗುಂಡಿನೇಟಿಗೆ ಗುರಿಮಾಡಿದನು.

ಓೀಗಿದೆ ಅತ್ಯಾಧುನಿಕತೆಯನ್ನು ಮೆರೆಸುವ ಇಂದಿನ ಶ್ರೀಮಂತಪುತ್ರರ ಕೊಲೆಗಡಿಕತನದ (Romantic) ಶೃಂಗಾರವೀರ ಕಥಾ ವಿನೋದ. ಇದು ಮನೆ ಮತ್ತು ಶಾಲೆಗಳ ಶಿಕ್ಷಣ ಪದ್ಧತಿಯ ನ್ಯೂನತೆಯನ್ನು ಬೆಳಕಿಗೆ ತರುತ್ತದೆ. "ನಮ್ಮ ಹುಡುಗ ಕೆಟ್ಟುಹೋದ" ಎಂಬ ಮಾತಾಪಿತೃಗಳಿಗೆ "ಅವನಿಗೆನೀವು ಕೊಟ್ಟ ಶಿಕ್ಷಣ ಸೌಕರ್ಯದ ಬಗೆಯಿಂದಲೇ ಅವನು ಹಾಗಾದ" ಎಂಬ ಉತ್ತರವನ್ನು ಕೊಡುತ್ತದೆ. ಅಲ್ಲದೆ ಕುಣಿತದವರ ಸ್ಥಾನಮಾನಗಳ ಮೇಲೂ ಬೆಳಕನ್ನು ಬೀರುತ್ತದೆ. ಲಲಿತ ಕಲೆಗಳನ್ನು ಜೀವನ ನಿರ್ವಹಣಕ್ಕಾಗಿ ಬಳಸಿಕೊಂಡಲ್ಲೆಲ್ಲ ಇಂಥ ಸ್ಥಿತಿ ಬರುವುದು ಸ್ವಾಭಾವಿಕ. ಪಾವಿತ್ರ್ಯ ಅಳಿದಲ್ಲಿ ಮಾನ್ಯತೆ ಉಳಿದೀತೇ ?

ಚಿತ್ರ ನೀತಿಬೋಧಕವೂ ರಸಾವಹವೂ ಆಗಿದೆ. ಶ್ರೀಗೂ . ಸರಸ್ವತಿಗೂ ಅಂದರೆ ದುಡ್ಡಿಗೂ ಸದ್ಬುದ್ಧಿಗೂ ನೆಂಟಿಲ್ಲ ಎಂಬ ಹಳೆಯ ಗಾದೆಯನ್ನೂ ತಾನು ಮಾಡಿದ್ದು ನ್ಯಾಯ, ಅದನ್ನೇ ಮಗ ಮಾಡಿದರೆ ಅನ್ಯಾಯ ಎಂಬ ಅಪರಾಧಿತ್ವದ ಚಿತ್ತವಿಕಾರವನ್ನೂ ಇದು ಚೆನ್ನಾಗಿ ಚಿತ್ರಿಸಿದೆ. ಅಭಿನಯ ಚಿತ್ರಗ್ರಹಣಾದಿಗಳು ಯಥಾ ಯಥಾ.

—ರಸಗಂಗಾಧರ

---

ಈ ಪದ್ಧತಿಯು ತನ್ನ ದೃಷ್ಟಿ, ತತ್ವ, ಹೂರಣ ಮತ್ತು ರಚನೆಗಳಲ್ಲಿ ಸಂಪೂರ್ಣವಾಗಿ ಆಂಗ್ಲ ಪದ್ಧತಿಯೇ ಆಗಿದೆ. (ಹರಿಜನ)

## ಮೂಲೆ ಮೂಲೆಗಳಿಂದ

**ಬ್ರಹ್ಮೀ ದಲದವರು** ಅಸ್ಸಾಂ ಗಡಿಗೆ ಧಾವಿಸಿ ಗಡಿಯಿಂದ ೨೦ ಮೈಲು ದೂರದಲ್ಲಿರುವ ಚಿಂಡ್ವಿನ್ ನದಿಯ ಸೇತುವೆಗಳನ್ನು ಉರುಳಿಸಿದ ಕಮ್ಯುನಿಸ್ಟ ದಂಗೆಗಾರರೊಡನೆ ಖಾಡಾಖಾಡಿ ಹೋರಾಡಿ ೬ ಜನ ಶತ್ರುಗಳನ್ನು ಸಂಹರಿಸಿದರು. ರಂಗೂನಿನಿಂದ ೩೬೦ ಮೈಲು ವಾಯುವ್ಯದಲ್ಲಿರುವ ಎಣ್ಣೆಯ ಪಟ್ಟಣವೆನಿಸಿದ ಯೆನನ್‌ಗ್ಯುವಂಗನ್ನು ಜನತಾ ಸ್ವಯಂಸೇವಕ ಸಂಘಟನೆಯ ಬೀ ಪಟ್ಟೆಯವರ ಕೈತಪ್ಪಿಸಿ ಸರಕಾರಿ ಸೈನಿಕರು ತಮ್ಮ ವಶಕ್ಕೆ ಮಾಡಿಕೊಂಡರು. ಆದರೆ ಮಂಡಾಲೆಯಿಂದ ೧೦೦ ಮೈಲು ಉತ್ತರಕ್ಕೆ ಇರುವ ತಿಗ್ಯಾಂಗ್ ಪಟ್ಟಣವು ಶತ್ರುಗಳ ವಶವಾಯಿತು.

ರಂಗೂನಿನಲ್ಲಿರುವ ಚೀನೀ ರಾಯಭಾರಿಯ ಹೇಳಿಕೆಯಂತೆ ಚೀನೀ ಪಕ್ಷಾಧಿಪತ್ಯಕ್ಕೆ ಸೇರಿದ ಬ್ರಹ್ಮೀ ರಸ್ತೆಯಲ್ಲಿಯ ಪಟ್ಟಣವಾದ ಪಾವಶಾನನ್ನು ಅನಿಯಂತ್ರಿತ ಚೀನೀ ಶಿಪಾಯಿಗಳು ಆಕ್ರಮಿಸಿದ್ದಾರೆಂದು ತಿಳಿಯುತ್ತದೆ.

**ಲೇಕ್‌ಸಕ್ಸೆಸ್ಸಿನಲ್ಲಿ** ಸೇರಿದ ಮಾನವ್ಯ ಹಕ್ಕುಗಳ ಸಮಿತಿ ಭಾರತದ ಪ್ರತಿನಿಧಿ ಶ್ರೀಮತಿ ಹಂಸಾ ಮೇಹ್ತಾ ಮುಂದಿಟ್ಟ ಮಸೂದೆಯನ್ನು ಅವಿರೋಧವಾಗಿ ಸ್ವೀಕರಿಸಿತು. ಮಸೂದೆಯಲ್ಲಿ ಕುಲ, ವರ್ಣ, ಲಿಂಗ, ಭಾಷೆ, ಧರ್ಮ ರಾಜಕೀಯ ಅಥವಾ ಇತರ ಮತ, ರಾಷ್ಟ್ರೀಯ ಅಥವಾ ಸಾಮಾಜಿಕ ಮೂಲ, ಹುಟ್ಟು ಅಥವಾ ಇತರ ಸ್ಥಾನಗಳನ್ನು ಲೆಕ್ಕಿಸದೆ ಪ್ರತಿಯೊಂದು ವ್ಯಕ್ತಿಗೂ ಮಾನವ್ಯ ಹಕ್ಕುಗಳ ನಿಯಮದಲ್ಲಿ ಹೇಳಿದ ಹಕ್ಕುಗಳನ್ನೂ ಸ್ವಾತಂತ್ರ್ಯಗಳನ್ನೂ ಕೊಡಲಾಗುವುದು.

ಪ್ಯಾರಿಸಿನಲ್ಲಿ ಕೂಡಿದ ಚತೂರಾಷ್ಟ್ರ ವಿದೇಶ ಮಂತ್ರಿಗಳ ಸಮ್ಮೇಲನದ ಬೇಡಿಕೆಯಂತೆ **ಬರ್ಲಿನ್ನಿನಲ್ಲಿ** ಸೇರಿದ ಆಕ್ರಾಮಕ ರಾಷ್ಟ್ರ ಚತುಷ್ಟಯದ ಆರ್ಥಿಕತಜ್ಞರು ಸೇರಿ ಬರ್ಲಿನ್ ದಿಗ್ಬಂಧನವನ್ನು ಸಂಪೂರ್ಣವಾಗಿ ಮುರಿಯುವ ಯೋಜನೆಗಳ ಮೇಲೆ ಒಪ್ಪಂದಕ್ಕೆ ಬರುವ ವಿಷಯದಲ್ಲಿ ನಡೆಸಿದ ಚರ್ಚೆ ನಿಷ್ಫಲವಾಯಿತು.

**ಸಯಾಮಿನಲ್ಲಿ** ಇತ್ತೀಚೆಗೆ ಕಮ್ಯುನಿಸ್ಟರ ಚಟುವಟಿಕೆ ಹೆಚ್ಚುತ್ತಿದೆಯೆಂದು ಅಲ್ಲಿಯ ಪೋಲೀಸು ಮುಖ್ಯಾಧಿಕಾರಿಯ ಅಭಿಪ್ರಾಯ. ರಾಕೆಟ್ ತೋಪಿಗಳಂತಹ ತೀಕ್ಷ್ಣ ಆಯುಧಗಳು ಅಲ್ಲಿಯ ಚೀನೀ ಮತ್ತು ವಿಯಟ್‌ನಾಮೀ ಕಮ್ಯುನಿಸ್ಟರ ಹತ್ತಿರ ಇವೆ ಎಂದು ತಿಳಿ... ತ್ತದೆ. ಅವರನ್ನು ಅಡಗಿಸಲೆಂದು ಬ್ರಿ... ಕಳುಹಿದ ಶಸ್ತ್ರಾಸ್ತ್ರಗಳನ್ನು ... ಇವೆಯಂತೆ.

**ದಕ್ಷಿಣ ಅಫ್ರಿಕೆದ** ... ಗಳೂ ಅಫ್ರಿಕನ್ನರ ಪಕ್ಷದ ಮುಖಂಡರೂ ... ಶ್ರೀ ಎನ್. ಸಿ. ಹವೆಂಗರ ನಿರ್ಣಯದ ... ಸಾರವಾಗಿ ಅಫ್ರಿಕನ್ನರ ರಾಷ್ಟ್ರೀಯ ... ದೊಡನೆ ಐಕ್ಯವಾದರು. ಇದರ ಪರಿ... ವಾಗಿ ಸರಕಾರೀ ಪಕ್ಷಕ್ಕೂ ಜನರಲ್ ಸ್ಮ... ಸಂಯುಕ್ತ ಪಕ್ಷಕ್ಕೂ ನಡುವೆ ಇರುವ ... ಕಾರಣಿಕ ಸಮಸ್ಯೆಗಳ ಬಿಕ್ಕಟ್ಟನ್ನು ... ಮಾಡಿದಂತಾಗುವದು.

**ಪೋರ್ಟ್ ಸೈಯದಿನಲ್ಲಿ** ... ಅಧಿಕಾರಿಗಳು ... ಬ್ರಿಟಿಶ್, ಡಚ್ ಮತ್ತು ... ಹಡಗುಗಳನ್ನು ಇಸ್ರೇಲಿಗೆ ಸಾಮಗ್ರಿಗ... ಒಯ್ಯುತ್ತಿರಬಹುದೆಂಬ ಶಂಕೆಯು ... ತಡೆಹಿಡಿಯಲಾಗಿದೆ. ಪೋರ್ಟ ಸೈಯ... ಕ್ರಯ ಸಮಿತಿಯ ಅಧ್ಯಕ್ಷೆಯು ದೇಶ... ಇಂಥ ತಡೆಗಳು ನಿಶ್ಚಯ ಸಂಭವಿಸುವುದೆ... ನೌಕಾಧಿಕಾರಿಗಳೆನ್ನುತ್ತಾರೆ.

**ಅಮೇರಿಕದ ಸಂಯುಕ್ತ ಸಂಸ...ದಲ್ಲಿ** ಇನ್ನು ಆರು ತಿಂಗಳೊಳಗೆ ೬೦ ... ಜನರು ನಿರುದ್ಯೋಗಿಗಳಾಗುವಷ್ಟು ಬ್ರಿ... ಕಾರದ ಆರ್ಥಿಕ ಬಿಕ್ಕಟ್ಟು ಸಂಭವಿಸ... ಯೆಂದು ಲೇಕ್‌ಸಕ್ಸೆಸ್ಸಿನ ಸಂ. ರಾ. ಸಂ... ಕಚೇರಿಯಲ್ಲಿಯ ಅರ್ಥಶಾಸ್ತ್ರಜ್ಞರು ... ಪ್ರಾಯಪಟ್ಟಿದ್ದಾರೆ; ಅಲ್ಲದೆ ಆ ಬಿಕ್ಕ... ಕಡಿಮೆಯೆಂದರೆ ೨ ವರ್ಷಗಳ ವರೆಗಾ... ಉಳಿಯುವುದು ಖಂಡಿತವೆಂಬುದು ... ಹೇಳಿದ ಭವಿಷ್ಯ.

೧೦ ಸಾವಿರ ಅಮೇರಿಕನ್ನರನ್ನೂ ಫಿಲಿಪ್ಪಿ... ರನ್ನೂ ಮರಣಾಂತಿಕ ಮುಂದೋಟದ ... ಬಾಟನ್ನಿನಲ್ಲಿ ಗುರಿಪಡಿಸಿದ ಜನರಲ್ ... ತರೋ ಹಿರನೋ ಮತ್ತು ಮೇಜರ್ ಜನ... ಬೋಶಿತಕ ಕಾವನೆ ಇವರನ್ನೊಳಗೊಂಡು ... ಜಪಾನಿಗಳನ್ನು ಗಲ್ಲಿಗೇರಿಸಲಾಯಿತೆ... **ಟೋಕಿಯೋದಲ್ಲಿರುವ** ಮಿತ್ರ ರಾಜ... ಸಾರಿದೆ.

ವಿಕ್ಟೋರಿಯಾದ ಹೊಸ ಗವರ್ನರರು ರಾಯಲ್ ನ್ಯಾವೀನ ... ರಲ್ಲರಾದ ಸರ್ ಡಲ್ಲಾಸ್ ಬ್ರೂಕ್ಸರು ಅಸ್ಟ್ರೇಲಿಯದ ವಿಕ್ಟೋರಿಯ ಎಂಬ ... ಗವರ್ನರರಾಗಿ ನಿಯುಕ್ತರಾಗಿದ್ದಾರೆ. ಇವರು ೧೯೧೮ ರಲ್ಲಿ ಜೇಬ್ರುಗ್ಗೆಯಲ್ಲಿ ಡಿ. ಎಸ... ಪ್ರಶಸ್ತಿಯನ್ನು ಪಡೆದರು. ಇವರಿಗೀಗ ೫೬ ವರ್ಷ ವಯಸ್ಸು, ಒಳ್ಳೆಯ ಆಟಗಾರರು.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು

ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದವರು ಈಗ "ಹಿಂದೂ ಧರ್ಮಸಾರ" ಮತ್ತು "ವಿದ್ಯಾಭ್ಯಾಸ" ಎಂಬೆರಡು ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಒಂದು ೪೭ ಪುಟಗಳದ್ದೂ ಇನ್ನೊಂದು ೫೨ ಪುಟಗಳದ್ದೂ ಇದ್ದರೂ ಎರಡರ ಬೆಲೆಯೂ ಹತ್ತೇ ಆಣೆ. ಬೆಲೆ ಕಾಗದದ್ದು, ಅಚ್ಚಿನದು—ಅಲ್ಲದೆ, ಪುಸ್ತಕಗಳಲ್ಲಿಯ ವಿಚಾರಗಳದ್ದಲ್ಲ. ಅವು ಅಮೌಲ್ಯವಾದವು. ಹಿಂದುಸ್ತಾನದ ವೇದಾಂತಕೇಸರಿ ಎನಿಸಿದ ಶ್ರೀ ವಿವೇಕಾನಂದರ ಅಪ್ರತಿಹತ ವಾಣಿಗಳನ್ನು ಆಣಿಮುತ್ತುಗಳಂತೆ ಈ ಕಿರುಹೊತ್ತಿಗೆಗಳಲ್ಲಿ ಕಾಣಬಹುದು.

ವಿದೇಶೀಯರೆದುರಿಗೆ ನಮ್ಮ ಪುರಾತನ ಸಾಹಿತ್ಯ ಸಂಸ್ಕೃತಿಯ ವೆಗ್ಗಳವನ್ನು ಹೇಳಿಕೊಳ್ಳುವ ರೂಢಿಯಂತೆ ತತ್ವಜ್ಞಾನ ಶೈಲಶಿಖರದಂತಿರುವ ಶ್ರೀ ವಿವೇಕಾನಂದರನ್ನಾದರೂ ಅವರಿವರೆದುರು ಹೊಗಳುವುದಷ್ಟನ್ನು ಮಾಡುವವರು ನಮ್ಮಲ್ಲಿ ಸಿಗಬಹುದಲ್ಲದೆ ಅವರ ಆದೇಶವೇನು, ಸಂದೇಶವೆಂಥದು, ಅವುಗಳಂತೆ ನಾವು ನಡೆದುಕೊಳ್ಳುತ್ತಿರುವೆವೆ? ಎಂಬುದರತ್ತ ಲಕ್ಷ್ಯ ಹಾಕುವವರು ವಿರಳ. ಗಾಂಧಿಯವರ ಒಳ್ಳೆಯತನವನ್ನು ಬಳಸಿಕೊಂಡು ವಾಚ್ಯಾತ್ರ ಗಾಂಧೀಭಕ್ತರಾಗಿ ಬಾಳುವ ಇಂದಿನ ಹಲವರಂತೆ ನಮ್ಮ ಮುಖಂಡರೆನಿಸಿಕೊಂಡಿರುವವರು ಕೂಡ ಜನರಿಂದ ಮಾನ್ಯತೆ ಪಡೆಯುವುದಕ್ಕಾಗಿ ನಮ್ಮ ಮಹಾಪುರುಷರನ್ನು ಸ್ತೋತ್ರ ಮಾಡುವುದು, ಮನದಲ್ಲಿ ಮತ್ತು ಕಾರ್ಯದಲ್ಲಿ ಅವರನ್ನೂ ಅವರ ತತ್ವೋಪದೇಶಗಳನ್ನೂ ಕಾಲಕಸಕ್ಕಿಂತ ಕಡೆಯಾಗಿ ಕಾಣುವುದು—ಇದೇ ರೂಢಿಯಾಗಿಬಿಟ್ಟಿದೆ. ಇಂದಿನ ಕಾಯದೆಗಾರರು, ರಾಜನೀತಿವಿಶಾರದರು ಮತ್ತು ಸಮಾಜ ಸುಧಾರಕರು ಇವರಲ್ಲಿ ಮೇಲಿನಂಥವರೇ ಹೆಚ್ಚು. ಪ್ರಸ್ತುತ ಪುಸ್ತಕಗಳನ್ನು ಓದುವವರಿಗೆ ಮೇಲಿನ ಮಾತು ಮನದಟ್ಟಾಗದಿರದು.

## ಧರ್ಮದ ನಿಜಪರಿಚಯ

ಸಂಸ್ಕೃತ ತಿಳಿಯದ, ಶಾಸ್ತ್ರಾರ್ಥವನ್ನು ಅರಿಯದ ಬುದ್ಧಿ ಸಂಸ್ಕಾರವಿಲ್ಲದ ಎಲ್ಲರಿಗೂ ಅಧಿಕೃತವಾಗಿ ಅವ್ಯಾಹತವಾಗಿ ನಿಜವಾದ ಆಧುನಿಕರೆನಿಸಿದ ಶ್ರೀ ವಿವೇಕಾನಂದರು ಹಿಂದುಧರ್ಮದ ಆಚಾರವಿಚಾರಗಳನ್ನು ಅತಿ ಸುಲಭವಾಗಿ ವಿವರಿಸಿ ಹೇಳಿದ್ದಾರೆ. ನೀನು ಹಿಂದುವೇನು? ಎಂದು ಕೇಳಿದರೆ ಹೌದೆಂದು ಉತ್ತರ ಕೊಡುವ ಪ್ರತಿಯೊಂದು ವ್ಯಕ್ತಿಗೂ ಈ ಪುಸ್ತಕದಲ್ಲಿರುವಷ್ಟು ಪ್ರಥಮಾವಧಿಕಜ್ಞಾನವಾದರೂ ಇರತಕ್ಕದ್ದು ಆಗತ್ಯ. ಅದು ಹಾಗೆ, ಇದು ಹೀಗೆ ಎಂದು ಹಿಂದು ಧರ್ಮದ, ಶಾಸ್ತ್ರಗಳ ಹೆಸರಿನಲ್ಲಿ ತಮಗೆ ಇಷ್ಟವೆನಿಸಿದ್ದೆಲ್ಲವನ್ನೂ ಪ್ರಶಂಸಿಸುವವರು ಅಗತ್ಯವಾಗಿ ಈ ಪುಸ್ತಕದಲ್ಲಿ ವೇದ, ವೇದಾಂತ ಸ್ಮೃತಿ, ಸೃಷ್ಟಿ, ಬ್ರಹ್ಮ, ಕರ್ಮ, ಆತ್ಮ, ಮುಕ್ತಿ, ವಿಗ್ರಹಾರಾಧನೆ, ಗುರು, ಅವತಾರ, ಯೋಗ ಎಂಬ ವಿಷಯಗಳ ಬಗ್ಗೆ ಹೇಳಿರುವುದನ್ನು ಮನನಮಾಡಬೇಕು.

ವಿವೇಕಾನಂದರ ವೈಜ್ಞಾನಿಕತೆಯನ್ನು ಕೆಳಗಿನ ಅವತರಣಿಕೆಗಳಲ್ಲಿ ಕಾಣಬಹುದು:

"ವೇದಾಂತದಲ್ಲಿರುವ ಧರ್ಮತತ್ವಗಳು ಎಂದಿಗೂ ಬದಲಾವಣೆ ಹೊಂದುವದಿಲ್ಲ... ಏಕೆಂದರೆ, ಧರ್ಮವು ಪ್ರಕೃತಿಯಲ್ಲಿ ಮತ್ತು ಮಾನವನಲ್ಲಿ ಅನಾದಿಯಾದ ತತ್ವಗಳ ಮೇಲೆ ನಿಂತಿರುವುದು. ಅವುಗಳು ಎಂದಿಗೂ ಬದಲಾವಣೆಯಾಗುವುದಿಲ್ಲ..... ಎಲ್ಲ ಪರಿಸ್ಥಿತಿಗಳನ್ನು ಮೀರಿ ನಿಂತಿರುವುದು ಮಾನವನ ಇಚ್ಛಾಶಕ್ತಿ ಮತ್ತು ಸ್ವಾತಂತ್ರ್ಯ. ಇವುಗಳ ಮುಂದೆ ಪ್ರಕೃತಿಯ ಎಲ್ಲ ಶಕ್ತಿಗಳೂ ಬಾಗಬೇಕು. ಇವುಗಳ ಆಜ್ಞೆಯನ್ನು ಅನುಸರಿಸಬೇಕು. ಇದೇ ಕರ್ಮತತ್ವದ ಪರಿಣಾಮ.... ನಾಮರೂಪವುಳ್ಳ ಪ್ರತಿಯೊಂದು ವಸ್ತುವೂ ಒಂದಾನೊಂದು ಕಾಲದಲ್ಲಿ ನೊದಲಾಗಬೇಕು, ಇರಬೇಕು, ಲಯವಾಗಬೇಕು. ಇವುಗಳು ವೇದಾಂತ ತತ್ವದ ನಿರ್ದಿಷ್ಟವಾದ ಸಿದ್ಧಾಂತಗಳು.... ಧರ್ಮವೆಂದರೆ ಸಾಕ್ಷಾತ್ಕಾರ, ಅದು ಹರಟೆಯಲ್ಲ, ಮತವಲ್ಲ, ಸಿದ್ಧಾಂತವಲ್ಲ...... ...ಧರ್ಮವೆಂದರೆ ಆದರಲ್ಲಿರುವುದು, ಅದರಂತೆ ಆಗುವುದು. ಕೇಳುವುದಲ್ಲ, ಒಪ್ಪಿಕೊಳ್ಳುವುದಲ್ಲ. ಅದು ಪೂರ್ಣ ಜೀವನ. ಯಾವುದನ್ನು ನಂಬುತ್ತೇವೆಯೋ ಅದರಂತೆ ಆಗುವುದು. ಇದೇ ಧರ್ಮ."

ಎರಡನೆಯದಾದ "ವಿದ್ಯಾಭ್ಯಾಸ" ದಲ್ಲಿ ವಿದ್ಯೆಯೆಂದರೇನು, ಶಿಕ್ಷಣದ ಕ್ರಮ, ಆದರ್ಶ, ಗುರು ಶಿಷ್ಯರ ಗುಣಗಳು, ಶೀಲ ಪರಿಪೋಷಣೆ, ಧಾರ್ಮಿಕ ವಿದ್ಯಾಭ್ಯಾಸ, ಭಾವ ಪೋಷಣೆ, ಸಹಿಷ್ಣುತೆ, ಸ್ತ್ರೀ ಶಿಕ್ಷಣ ಮುಂತಾದ ಅಂಶಗಳನ್ನು ತಮಗೆ ಸಹಜವಾದ ಧೀರ ಗಂಭೀರವೂ ತರ್ಕಶುದ್ಧವೂ ಆದ ಶೈಲಿಯಲ್ಲಿ ಶ್ರೀ ವಿವೇಕಾನಂದರು ವಿವರಿಸಿದ್ದಾರೆ. ಸ್ತ್ರೀಯರ ಸಮಸ್ಯೆಯನ್ನೆತ್ತಿ ಮಾತಾಡುವಾಗ ಅವರು ಹೀಗೆ ಉದ್ಗರಿಸಿದ್ದಾರೆ:

### ಸ್ತ್ರೀ ಶಿಕ್ಷಣ

"ಸ್ತ್ರೀಯರಿಗೆ ನಾನಾ ತರಹದ ಕಷ್ಟವಾದ ಸಮಸ್ಯೆಗಳಿವೆ. ಆದರೆ ವಿದ್ಯಾಭ್ಯಾಸ ಎಂಬ ಅಮೋಘವಾದ ಮಂತ್ರದಿಂದ ನಿವಾರಿಸಲಾಗದ ಸಮಸ್ಯೆ ಇಲ್ಲ..... ಸ್ತ್ರೀಯರ ಶಿಕ್ಷಣ ಧರ್ಮವನ್ನು ಕೇಂದ್ರಮಾಡಿಕೊಂಡು ಹರಡಬೇಕು. ಉಳಿದ ಎಲ್ಲ ಶಿಕ್ಷಣವೂ ಧರ್ಮಕ್ಕೆ ಎರಡನೆಯದಾಗಿರಬೇಕು. ಧಾರ್ಮಿಕ ಶಿಸ್ತು, ಶೀಲಪೋಷಣೆ, ಬ್ರಹ್ಮಚರ್ಯನಿಯಮ ಇವುಗಳನ್ನು ನೋಡಿಕೊಳ್ಳಬೇಕು. (ಆಗ) ನಮ್ಮ ಹಿಂದೂ ನಾರಿಯರು ಪಾತಿವ್ರತ್ಯವೆಂದರೆ ಏನೆಂಬುದನ್ನು ಸುಲಭವಾಗಿ ತಿಳಿದುಕೊಳ್ಳುವರು .... ಭಾರತೀಯ ನಾರಿಯರು ಸೀತೆಯ ಶೀಲದ ಮೇಲ್ಪಂಕ್ತಿಯಲ್ಲಿ ಬೆಳೆಯಬೇಕು.... ನಮ್ಮ ಸ್ತ್ರೀಯರನ್ನು ಆಧುನಿಕರಂತೆ ಮಾಡುವಾಗ, ಸೀತಾದೇವಿಯ ಆದರ್ಶವನ್ನು ತೊರೆಯಲು ಯತ್ನಿಸಿದರೆ ಅದು ನಮಗೆ ಪ್ರತಿದಿನವೂ ತೋರುವಂತೆ ನಿಷ್ಫಲವಾದಂತೆಯೇ... ವಿದ್ಯಾ ಮತ್ತು ಶೀಲಸಂಪನ್ನರಾದ ಬ್ರಹ್ಮಚಾರಿಣಿಯರು ಶಿಕ್ಷಣದ ಕೆಲಸವನ್ನು ವಹಿಸಬೇಕು....ಇತಿಹಾಸ ಮತ್ತು ಪುರಾಣಗಳು, ಮನೆ ಕೆಲಸ ಮತ್ತು ಇತರ ಕಲೆಗಳು, ಸಂಸಾರ ಧರ್ಮಗಳು ಮತ್ತು ಶೀಲಸಂಪನ್ನರಾಗಿ ಮಾಡುವ ನಿಯಮಗಳು ಇವುಗಳನ್ನು ಬೋಧಿಸಬೇಕು....ಇವುಗಳೊಂದಿಗೆ ಶೌರ್ಯ ಮತ್ತು ಪರಾಕ್ರಮಗಳನ್ನು ಗಳಿಸಬೇಕು."

ಪ್ರಸ್ತುತ ಪುಸ್ತಕಗಳು ಇಂಗ್ಲೀಷಿನಲ್ಲಿ ಎಂದೋ ಪ್ರಕಟವಾಗಿವೆ; ಆದರೆ ಕನ್ನಡಕ್ಕೆ ಹೊಸತಾಗಿವೆ. ಅನುಕ್ತ ನಾಮಧೇಯರಾದ ಬರಹಗಾರರ ಭಾಷಾಜ್ಞಾನ ಸಾಕಷ್ಟಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಹಿಂದೆ ಶ್ರೀ ಶಾರದಾಮಣಿದೇವಿಯವರ ಕಥೆಗೆ ಶ್ರೀ ಕುವೆಂಪು ಅವರ ಮುನ್ನುಡಿಯನ್ನು ಅಂಟಿಸಿ ಅದನ್ನು ಜನಪ್ರಿಯವನ್ನಾಗಿ ಮಾಡಲು ಯತ್ನಿಸಿದಂತೆ ಇವಕ್ಕೆ ಮುನ್ನುಡಿ ಬರೆಸಲು ಹೋಗದುದು ಒಂದು ಪುಣ್ಯ. ಉತ್ತಮ ವಿಷಯವನ್ನು ಉತ್ತಮ ರೀತಿಯಿಂದ ಹೇಳಿದರೆ ಆಗುವಷ್ಟು ಪರಿಣಾಮ ಮಧ್ಯಮರೀತಿಯಿಂದ ಹೇಳಿದರೆ ಆಗದು. ನಾಗರಿಕವೇಷ ಧರಿಸಿದವನು ಅನಾಗರಿಕ ನಡೆನುಡಿಯನ್ನು ಅವಲಂಬಿಸಿದರೆ ಶೋಭಿಸದು. ಕೋಟ್ಯಾನು ವರುಷಗಳು, ಪ್ರಾಮುಖ್ಯತೆ, ಕಾಯ, ವಾಚ, ಮನಸಾ, ನಾಗರೀಕತೆ, ಹೊಲೆಯುವುದು, ಜೀವಶ್ಯವ ಮುಂತಾದ ಹಲವಾರು ಅಪಪ್ರಯೋಗಗಳು ವಿದ್ಯಾಭ್ಯಾಸ ಎಂಥದಿರಬೇಕು ಎಂಬುದನ್ನು ಹೇಳುವ ಪುಸ್ತಕದಲ್ಲಿಯೂ ಬಂದರೆ ಉಂಟಾಗುವ ವ್ಯಾಹತಿ ಅಕ್ಷಮ್ಯ. ಮಿಕ್ಕದ್ದೆಲ್ಲಾ ಚೆನ್ನ. ವಿಷಯ ಪ್ರಾಮುಖ್ಯವನ್ನರಿತ ಕನ್ನಡಿಗರು ಈ ಪುಸ್ತಕಗಳಿಗೆ ತಕ್ಕ ಪ್ರೋತ್ಸಾಹವನ್ನು ನೀಡುವುದು ಖಂಡಿತವಾಗಿಯೂ ಲಾಭಕರ.

---

# ಕಾ ಲ ಪ್ರ ವಾ ಹ

'ಕಾಲಪ್ರವಾಹ'ವೆಂಬುದು ಧಾರವಾಡದ ನವಕಲ್ಯಾಣಮಠದ ಶ್ರೀ ವೀ. ರು. ಕೊಪ್ಪಳರು ಪ್ರಕಾಶಪಡಿಸಿದ ೯೭ ಪುಟಗಳ ೧ ರೂ. ೪ ಅ. ಬೆಲೆಯುಳ್ಳ ಚಿಕ್ಕ ಪುಸ್ತಕ. ಇದರಲ್ಲಿ ಶ್ರೀ ಕುಮಾರಸ್ವಾಮಿಗಳವರ ಉಪನ್ಯಾಸಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಕಾಲಪ್ರವಾಹವೆಂಬುದು ಮೊದಲನೆಯ ಉಪನ್ಯಾಸ. ಇಲ್ಲಿ ಕಾಲಜ್ಞಾನಸೂಚಕವಾದ ಶರಣಗೀತಗಳನ್ನು ಅಜರಾಮರ ಸತ್ಯವನ್ನು ಸಾರುವ ವಾಣಿಯೆಂದು ಹೇಳಿ ಅದರ ಸಮರ್ಥನೆಗಾಗಿ ಕಾಲಜ್ಞಾನದ ಪದದ ನುಡಿಗಳನ್ನು ಉದಾಹರಿಸಿ ಅವಕ್ಕೆ ತಮ್ಮ ಕಲ್ಪನೆಗೆ ಸರಿದೋರಿದ ವ್ಯಾಖ್ಯೆಯನ್ನು ಶ್ರೀ ಕುಮಾರಸ್ವಾಮಿಗಳು ಕೊಟ್ಟಿದ್ದಾರೆ. ತತ್ವಶಾಸ್ತ್ರ ಮತ್ತು ಇತಿಹಾಸಗಳಿಗೆ ಸಂಬಂಧಿಸಿದ ಆಧುನಿಕ ಪುಸ್ತಕಗಳನ್ನೋದಿದ ಶ್ರೀ ಸ್ವಾಮಿಗಳು ಅಸ್ಪಷ್ಟ ಮತ್ತು ಸಂದಿಗ್ಧವಾದ ಈ ಶರಣರ ಪದಗಳಿಗೆ ಹೊಂದಿಸಿ ಆಧುನಿಕ ವಿಚಾರಗಳನ್ನು ಅವರು ಎಂದೋ ಹೇಳಿಬಿಟ್ಟಿದ್ದಾರೆ ಎಂದು ಸಾಧಿಸಿದ್ದಾರೆ. ಎಲ್ಲೋ ಒಂದೆರಡು ಕಡೆ ಶರಣರ ಪದಗಳು ಸಂದಿಗ್ಧವಾಗಿ ಆಧುನಿಕ ಐತಿಹಾಸಿಕ ಸತ್ಯವನ್ನು ಕಾಕತಾಳೀಯ ನ್ಯಾಯದಿಂದ ಸೂಚಿಸುತ್ತಿರುವುದು ನಿಜವಾದರೂ ಹಲವೆಡೆ ತೀರಾ ಸ್ವಕಪೋಲ ಕಲ್ಪಿತವೆನಿಸುವ ಶುದ್ಧ ಕೃತ್ರಿಮ ವ್ಯಾಖ್ಯೆಯನ್ನು ಗಳಹುಮಾತುಗಳೆನಿಸುವ ಪದಗಳಿಗೆ ಹಚ್ಚಿ ಕುತರ್ಕ ಪ್ರಯೋಗ ಮಾಡಿರುವುದು ವಿದ್ವನ್ ಮಾನ್ಯವೆನಿಸದು.

### ಕಲ್ಪನಾ ವಿಲಾಸ

ಹಿಂದಕ್ಕೆ ಹತ್ತು ಮುಂದಕ್ಕೆ ಹನ್ನೊಂದು
ನಂದಿಯಾಹಬ್ಬ ಅಮವಾಸ್ಯೆ ದಿನದಲ್ಲಿ
ಚಂದ್ರ ಸೂರ್ಯರ ಗ್ರಹಣವು, ಸ:ಪ್ಪಿ॥

ಎಂಬುದಕ್ಕೆ ಕೊಟ್ಟ ವ್ಯಾಖ್ಯೆಯನ್ನು ನೋಡಿರಿ: 'ಹಿಂದಕ್ಕೆ ಹತ್ತು (೧+೯=೧೦) ಮುಂದಕ್ಕೆ೧೧ (೪+೭=೧೧) ಆದ ವರುಷ ೧೯೪೭, ಅಂದು ನಾಗರ ಅಮಾವಾಸ್ಯೆ; ಅದು ೧೯೪೭ ನೆಯ ಅಗಸ್ಟ ೧೫ ನೆಯ ದಿನ. ಆ ದಿನ ಪಾಕಿಸ್ತಾನದಲ್ಲಿ ಚಂದ್ರನ ಗುಡಿ ಕಟ್ಟಿತು. ಹಿಂದುಸ್ತಾನದಲ್ಲಿ ಕನಕಧ್ವಜ (ಕನಕದ ಪತಾಕೆ, ಸಿಂಧು ಧ್ವಜ) ಹಾರಾಡಿತು. ಆದರೆ ರಾಜಕೀಯ ರಂಗದಲ್ಲಿ ಅಂದು ಭಾರತದ ಒಂದು ಭಾಗಕ್ಕೆ ಒಂದು ರೀತಿಯಿಂದ ಗ್ರಹಣವಾದರೆ ಇನ್ನೊಂದಕ್ಕೆ ಬೇರೊಂದು ಬಗೆಯಾಗಿ ಗ್ರಹಣವಾಯಿತು'. ಬುದ್ಧಿಯುಳ್ಳವರು ಇದನ್ನು ನಂಬುವ ಸಾಹಸವನ್ನು ಮಾಡಿಯಾರೇ?

ಹೆದ್ದೊರೆಯ ಕರುಳನು ಕದ್ದಾರು ಕಾಮಗೆ
ಬುದ್ಧಿವಂತರು ತಂದು ಒಟ್ಯಾರು ಮಾ॥
ರುದ್ರ ಹನ್ನೊಂದೆಂಬ ಬೆಂಕಿಯನು ಪುಟವಿಕ್ಕಿ ಸುದ್ದಿಗರು ಸಾರುತ್ತ ನಲಿದಾರೊ
ಹರಳಾ॥

ಎಂಬುದಕ್ಕೆ "ಜಗತ್ತಿನ ಒಟ್ಟು ಸಂಪತ್ತಿಯ ಎರಡು ಮೂರಾಂಶ ಭಾಗವು ಅಮೇರಿಕೆಯೊಂದರಲ್ಲಿಯೇ ಇದೆ ಎಂಬುದು ನಿಜವಾಗಿಯೂ ಅಚ್ಚರಿಯ ಮಾತು. ಮೊನ್ನಿನ ಮಹಾಯುದ್ಧದಿಂದ ಅದಕ್ಕೆ ದೊರೆತ ಗೌರವ, ಅಣುಶಕ್ತಿಯ ಸಂಶೋಧನೆ ಸ್ವಾಮಿತ್ವಗಳಿಂದ ಅದಕ್ಕುಂಟಾದ ಹೆಮ್ಮೆ ಮತ್ತು ಜಗತ್ತಿನ ಕಣಜದಂತಿರುವ ಅದರ ಸ್ವಾಭಾವಿಕ ಸಂಪತ್ತು ಇವುಗಳಿಂದಾಗಿ ಅದಕ್ಕೆ ಪ್ರತಿಸ್ಪರ್ಧಿಗಳಾಗಿ ಯಾರೂ ಎದುರಿಗೆ ನಿಲ್ಲದ ಬಲಿಷ್ಠ ರಾಷ್ಟ್ರವಾಗಿದೆ ಅದು. ಕಾರಣ ಪ್ರಭುದೇವರು ನಿರೂಪಿಸಿರುವ ಹೆದ್ದೊರೆ– ಹಿರಿಯದೊರೆ ಅಮೇರಿಕೆಯೇ ಸರಿ!" ಇದೂ ಒಂದು ಅಂಥದೇ ನಿದರ್ಶನ. 'ಅಮೊಚತಿ' ಎಂದರೆ ಅವಲಕ್ಕಿ, ಮೊಸರು, ಚಟ್ನಿ ಹಾಕಿಕೊಂಡು ತಿನ್ನುವುದು ಎಂದಾಗುತ್ತದೆ ಎಂಬ ವ್ಯಾಖ್ಯಾನ ಪದ್ಧತಿಗೂ ಮೇಲಿನದಕ್ಕೂ ಬಹಳ ವ್ಯತ್ಯಾಸವಿಲ್ಲ.

### ಹುರುಳಿಲ್ಲದ ವಾದ

ಭಾರತೀಯರ ಸಾಮ್ಯವಾದವೆಂಬ ಎರಡನೆಯ ಉಪನ್ಯಾಸದಲ್ಲಿ 'ಇಂದಿನ ಲಿಂಗವಂತರು ಶಿವಶರಣರ ಆದಿನಾಯಕನಾದ ಬಸವಣ್ಣನು ತಮ್ಮವನೆಂದು ಒಪ್ಪಿ ಅಪ್ಪಿಕೊಳ್ಳಲಿ ಇಲ್ಲವೆ ತಪ್ಪಿತಳ್ಳಲಿ, ಅವನು ತಮ್ಮ ಮತಪುರಸ್ಕರ್ತನೆಂದು ಭಜಿಸಲಿ ಇಲ್ಲವೆ ತ್ಯಜಿಸಲಿ ಆ ಮಾತು ಬೇರೆ. ಆದರೆ ಜಗತ್ತಿನ ಸಾಮ್ಯವಾದದ ಇತಿಹಾಸವನ್ನು ಬರೆಯುವ ಕಾಲ ಬಂದಾಗ ಮಾತ್ರ ಆ ಇತಿಹಾಸದಲ್ಲಿ ಅತನಿಗೆ ಒಂದು ಚಿರಸ್ಮರಣೀಯವಾದ ಸ್ಥಾನವುಂಟೆಂಬುದನ್ನು ನೆನಪಿನಲ್ಲಿಡಬೇಕು. ಮುಂದಿನ ಸಂತತಿಯು ಬಸವಣ್ಣನು ಲಿಂಗವಂತನೆಂದಾಗಲಿ ಒಂದು ಮತಸ್ಥಾಪಕನೆಂದಾಗಲಿ, ಒಬ್ಬ ಮುಖ್ಯ ಮಂತ್ರಿಯೆಂದಾಗಲಿ, ಇಲ್ಲವೆ ಕನ್ನಡ ನಾಡಿನ ಒಬ್ಬ ಶ್ರೇಷ್ಠ ಸಾಹಿತಿಯೆಂದಾಗಲಿ ನೆನೆಸುವುದಿಲ್ಲ. ಆದರೆ ಬುದ್ಧದೇವನಂತೆ ಅವನೊಬ್ಬ ನಿಜವಾದ ಸಾಮ್ಯವಾದಿಯೆಂದೂ ಮಾನವಕೋಟಿಯ ಕಲ್ಯಾಣಕ್ಕಾಗಿ ಹೆಣಗಿದ ಮಹಾವೀರನೆಂದೂ ತನ್ನ ಕೈಚಳಕದಿಂದ ಸಾಮ್ಯವಾದವು ಚಿಗುರೊಡೆದು ಹರಿಯುವಂತೆ ಮಾಡಿದ ಸಜ್ಜನಶಿರೋಮಣಿಯೆಂದೂ ಬಗೆಯುತ್ತಿದೆ; ಹಾಗೆ ಜಗತ್ತಿಗೆ ಬೀರುತ್ತಿದೆ,' ಎಂದು ಬಸವಣ್ಣನವರ ನೀತಿವಾಕ್ಯಗಳಲ್ಲಿ ಸೂಚಿತವಾಗುವ ಭೇದನಿರಾಸವನ್ನು ಆಧರಿಸಿ ಆಧುನಿಕವೆನಿಸುವ ಅರ್ಥಸೂತ್ರದ ಮೇಲೆ ನಿಂತ ಸಾಮ್ಯವಾದವನ್ನು ಬುದ್ಧ, ಬಸವಣ್ಣಾದಿಗಳು ಬೇರೆ ಬೇರೆ ಕ್ಷೇತ್ರಗಳಲ್ಲಿ ಎಂದೋ ಸಾರಿದ್ದರೆಂಬುದೂ, "ಪೃಷ್ಠಶೀತೇ ಪ್ರಾಣನಾಶಃ" ಎಂಬುದೂ ಒಂದೇ. ಏಕೆಂದರೆ, ಜಗನ್ಮಾನ್ಯ ಮಹಾಪುರುಷರೆಲ್ಲರೂ ದೇವರ ಮಕ್ಕಳಾದ ಮಾನವರೆಲ್ಲರೂ ಸಮಾನರು ಎಂಬ ಅರ್ಥ ಬರುವ "ಮಾತುಗಳನ್ನು ಆಡಿಯೇ ಇದ್ದಾರೆ. ಹಾಗೆ ನೋಡಿದರೆ "ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ" ಎಂಬ ಹಿಂದು ಧರ್ಮದ ಮೂಲಾಧಾರತತ್ವ ಇದಕ್ಕೂ ಹೆಚ್ಚಿನ ಸಾಮ್ಯವನ್ನು ಹೇಳುತ್ತದೆ, ಮನುಷ್ಯರಿಗೆಮಾತ್ರವಲ್ಲದೆ ಸಮಸ್ತ ಸೃಷ್ಟ ಜಂತುಗಳಿಗೂ ಸಾಮ್ಯವನ್ನು ಅನ್ವಯಿಸಿ ಹೇಳಿದೆ. ಅದರಿಂದ ಇದರಲ್ಲಿ ಸುವ್ಯವಸ್ಥಿತವೂ ಸ್ವಯಂಪೂರ್ಣವೂ ಆದ ಆಧುನಿಕ ರಾಜಕೀಯ ಕಲ್ಪನೆಯಾದ ಸಾಮ್ಯವಾದ ಉಕ್ತವಾಗಿದೆ ಎನ್ನಲಾದೀತೆ? ಮೊದಲು ಪೃಷ್ಠಕ್ಕೆ ಶೀತವಾದರೆ ಅದು ಇಡಿ ದೇಹದ ನರಮಂಡಲಗಳನ್ನೆಲ್ಲ ವ್ಯಾಪಿಸಿ ಅವನ್ನು ಸ್ತಬ್ಧಗೊಳಿಸಿ ಮನುಷ್ಯನ ಮರಣಕ್ಕೆ ಕಾರಣವಾಗಬಹುದು. ಹಾಗೇ ಈ ಮಹಾಪುರುಷರ ನೀತಿವಾಕ್ಯಗಳು ಜನರಲ್ಲಿ ಸಾಮ್ಯನೀತಿಯನ್ನು ಬೆಳೆಸಿ ಕಾಲಕ್ರಮೇಣ (ಆ ಕಾಲ ಸಾವಿರ ವರ್ಷಗಳಲಿ, ಕೋಟಿ ವರ್ಷಗಳಲಿ) ಅವರನ್ನು ಆಧುನಿಕ ಅರ್ಥದಲ್ಲಿ ಸಂಪೂರ್ಣ ಸಾಮ್ಯವಾದಿಗಳನ್ನಾಗಿ ಮಾಡಿಬಿಡಬಹುದು–ಅಲ್ಲವೇ? ಸಾಮ್ಯವಾದದಲ್ಲಿ ಉಕ್ತವಾದ ಎಷ್ಟೋ ನೀತಿತತ್ವಗಳು ಅತ್ಯಂತ ಪ್ರಾಚೀನವಾದವುಗಳಿವೆ. ಬೇಕಾದವರು ನಮ್ಮ ಹಳೆಯ ನೀತಿಗ್ರಂಥಗಳನ್ನು ಅವಲೋಕಿಸಲಿ. ಆ ಕಾರಣದಿಂದ ಅಂದಿನ ಮಹಾತ್ಮರನ್ನು ಸಾಮ್ಯವಾದದ ಇತಿಹಾಸದಲ್ಲಿ ಚಿರ ಸ್ಮರಣೀಯ ಸ್ಥಾನವುಳ್ಳವರೆಂಬ ಮಾತಿನಲ್ಲಿ ಅರ್ಥವಿಲ್ಲ. ಆ ನೈತಿಕ ಸಾಮ್ಯವಾದಕ್ಕೂ ಈ ವ್ಯವಹಾರವಿವರಪೂರ್ಣವಾದ ಅರ್ಥನೀತಿ ರಾಜನೀತಿಗಳ ಮೇಲೆ ನಿಂತ ಮಾರ್ಕ್ಸ ಮುನಿಯ ದರ್ಶನವಾದ ಸಾಮ್ಯವಾದಕ್ಕೂ ಇರುವ ವ್ಯತ್ಯಾಸವನ್ನು ತಿಳಿದೂ ಹೆಣಗಿ ಹೆಣಗಿ ಹೇಗೆ ಹೇಗೋ ಅದಕ್ಕೂ ಇದಕ್ಕೂ ಸಂಬಂಧ ಹಚ್ಚಹೋಗುವದು ಸರಿಯಾಗಲಾರದು..

ಮಾನವಸಂಸ್ಕೃತಿಯೆಂಬ ಮೂರನೆಯ ಮತ್ತು ಕಡೆಯ ಉಪನ್ಯಾಸದಲ್ಲಿ ಉಪನ್ಯಾಸಕಾರರು ಪೌರಸ್ತ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ತಾರತಮ್ಯವನ್ನು ಚೆನ್ನಾಗಿ ಹೇಳಿದ್ದಾರೆ. ಆದರೆ ಇದಾದರೂ ಸ್ಥೂಲವಾಗಿ ಪಾಶ್ಚಾತ್ಯ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಟ್ಟಂತೆಯೇ ಇದೆಯಲ್ಲದೆ ಅದರ ಸತ್ಯತೆ, ಅಸತ್ಯತೆಗಳ ಬಗ್ಗೆ ವಿವೇಚಿಸಿ ಬರೆದದ್ದಲ್ಲ. ಅಂಶತಃ ಅವು ಭಿನ್ನವಿವೆಯೋ ಸಂಪೂರ್ಣವಾಗ ಭಿನ್ನವಿವೆಯೋ ಆ ಭೇದದ ಕಾರಣಸಾಮಗ್ರಿಗಳಾವುವು? ಎಂಬ ವಿವರಗಳನ್ನು ಪಾಶ್ಚಾತ್ಯ ಗ್ರಂಥಗಳಲ್ಲಿ ಕೊಟ್ಟಂತೆಯೂ ಕೊಟ್ಟಿಲ್ಲ. ಒಟ್ಟಿನಲ್ಲಿ ಸಂಕ್ಷೇಪರಾಮಾಯಣವೆನಿಸಿದರೂ ಇದು ಮೊದಲಿನ ಎರಡು ಉಪನ್ಯಾಸಗಳಿಗಿಂತ ಉತ್ತಮವಾಗಿದೆ ಎಂದು ಧಾರಾಳವಾಗಿ ಹೇಳಬಹುದು. ಪೃಥುಕ್, ಪರಾಕಾಷ್ಟತೆ, ಜಾತ್ಯಾತೀತ, ಸ್ವಾತಂತ್ರ್ಯತೆ, ಆಧ್ಯಾತ್ಮಿಕತೆ, ಕಠಿಣ ವ್ರತಾಚರಣೆ, ಶಿಸ್ತಿಹಾಕಿ, ವೈಶಾಲ್ಯತೆ, ನಿರ್ಬಯಲು, ಔದ್ಧಾತ್ಯ ಮುಂತಾದ ಅಸಾಧು ಪ್ರಯೋಗಗಳೂ "ನಿರ್ವಿಚಾರದಿಂದ ಚಿತ್ತದ ವೃತ್ತಿಯನ್ನು ಅಳಿದುಕೊಂಡರೆ ಅದುವೇ ಯೋಗ" ಎಂಬಂತಹ ಹಿಂದುಮುಂದಿಲ್ಲದ ಮಹಾವಾಕ್ಯಗಳೂ ಭೂಷಣವೆನಿಸವು. ಹೀಗೆ ಉಕ್ತ ನ್ಯೂನತೆಗಳನ್ನುಳಿದರೆ, ಇವನ್ನು ಬಿಟ್ಟರೆ ಇಡಿ ಪುಸ್ತಕದಲ್ಲಿ ತುಂಬಿದ ಆಧುನಿಕ ತತ್ವ, ನೀತಿ, ವಿಚಾರ, ಆದರ್ಶಗಳ ವಿವರಣೆ ಇವು ಜಿಜ್ಞಾಸುಗಳಿಗೆ ಅತ್ಯವಶ್ಯವಾಗಿ ಸಂಗ್ರಾಹ್ಯವೆನಿಸುವ ಬೆಲೆಯುಳ್ಳವಾಗಿವೆ ಎಂದು ನಿರ್ದಾಕ್ಷಿಣ್ಯವಾಗಿ ಹೇಳಲು ಸಂತೋಷವಾಗುತ್ತದೆ.

---

ಭಾಗಲಪುರದಿಂದ ತಾರಾಪುರಕ್ಕೆ ಹೊರಟ ಒಂದು ಬಸ್ ಗಾಡಿಯು ನಾಲ್ಕು ಮೈಲು ಪ್ರವಾಸ ಮಾಡುವಷ್ಟರಲ್ಲಿಯೇ ಅದರ ಎಂಜಿನಿಗೆ ಒಮ್ಮೆಲೇ ಬೆಂಕಿ ಹತ್ತಿದ್ದರಿಂದ ಅದರಲ್ಲಿ ಪ್ರವಾಸ ಮಾಡುತ್ತಿದ್ದ ಪ್ರವಾಸಿಕರಲ್ಲಿ ಒಬ್ಬನು ಮರಣಹೊಂದಿದನಲ್ಲದೆ ಅನೇಕರು ನ್ಯೆಸುಟ್ಟುಕೊಂಡಿದ್ದಾರೆ. ನೆರೆಹೊರೆಯ ಹಳ್ಳಿಗರು ಒಮ್ಮೆಲೇ ಓಡಿ ಬಂದು ಪ್ರವಾಸಿಕರನ್ನು ಪಾರು ಮಾಡಿ ಆಸ್ಪತ್ರೆಗೆ ಸಾಗಿಸಿದರು.

ಕೆಲವರ ಪರಿಸ್ಥಿತಿಯು ಬಹಳ ಚಿಂತಾಜನಕವಾಗಿದೆಯೆಂದು ಹೇಳಲಾಗುತ್ತಿದೆ.



# ಜೂನ ೨೦ ರಿಂದ ೨೬ ರ ವರೆಗೆ

ಜ್ಯೋತಿಷಿ — ಶ್ರೀ ಕೃಷ್ಣಶಾಸ್ತ್ರಿ ಭಡೆ, ಬೆಳಗಾವಿ

### ಮೇಷ

ಈ ವಾರ ನಿಮ್ಮ ಪ್ರಕೃತಿ ಸಾಧಾರಣವಿದ್ದರೆ ಮನೆಯಲ್ಲಿಯ ಹಿರಿಯ ಸ್ತ್ರೀಯರಿಗೆ ಕ್ಲೇಶ. ಹೀಗಿದ್ದರೂ ಹೆಂಡತಿ ಮತ್ತು ಮಕ್ಕಳ ಸುಖ ಅನುಕೂಲ. ಉಳಿದ ವಿಷಯಗಳಲ್ಲಿ ಮಾತ್ರ ಪ್ರಾಪಂಚಿಕ ದಗದಗಿ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅನುಕೂಲವಿದ್ದರೂ ವೆಚ್ಚಮಾತ್ರ ವಿಪರೀತವಾಗುವದರಿಂದ ಮನಸ್ಸಿನಲ್ಲಿ ಸ್ವಾಸ್ಥ್ಯವೇ ಉಳಿಯುವದಿಲ್ಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು ದೊರೆತರೂ ಶತ್ರುಗಳು ಘಾತುಕ ಆಗುವ ಪ್ರಯತ್ನವನ್ನು ಒಳ್ಳೆ ಜೋರಿನಲ್ಲಿ ನಡೆಸುವರು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಬಹಳ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ಮೊದಲನೆ ಚರಣಕ್ಕೆ ತೊಂದರೆ ಕಡಮೆ. ತಾ. ೨೧—೨೨—೨೪.೨೫ ಅನುಕೂಲ.

### ವೃಷಭ

ನಿಮ್ಮ ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲವಿದ್ದರೂ ನೋಕರ ಚಾಕರರು ನೆರೆ ಹೊರೆಯವರು ಮತ್ತು ಮಕ್ಕಳಲ್ಲಿ ಕೆಲವು ಜನರು ನಿಮ್ಮ ವಿರುದ್ಧ ಕಾರಸ್ಥಾನ ಮಾಡುವರು. ಮನೆಯಲ್ಲಿಯೂ ಅಲ್ಪಸ್ವಲ್ಪ ಜಗಳ ಹುಟ್ಟುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮವೆನಿಸುವದು. ನಿರರ್ಥಕ ಕೆಲಸಗಳಲ್ಲಿ ಬಹಳ ವೆಚ್ಚ. ಸ್ಥಾವರದಲ್ಲಿ ಕೆಲ ಅನುಕೂಲ ಘಟನೆಗಳು. ಮಿತ್ರ ಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ರೋಹಿಣಿಯ ಕೊನೆಯ ೩ ಮತ್ತು ಮೃಗದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು.

### ಮಿಥುನ

ನಿಮ್ಮ ಪ್ರಕೃತಿ ಕೆಟ್ಟರೂ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ಉತ್ತಮ ಉಳಿದ ಬಂಧು ವರ್ಗದವರಲ್ಲಿಯೂ ಉನ್ನತಿಯಾಗುವದು. ಮಕ್ಕಳಲ್ಲಿಯೂ ವಿಶೇಷ ತರದ ಪ್ರಗತಿಯ ಘಟನೆಗಳು ಸಂಭವಿಸುವವು. ಆದರೂ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣ. ಉದ್ಯೋಗದಲ್ಲಿ ಪ್ರಗತಿ ಅನುಕೂಲವಿದ್ದರೆ ಪ್ರತಿಷ್ಠೆ ಮತ್ತು ಲಾಭ ಬಹಳ ಕಡಮೆ. ಎರಡನೆಯವರ ತಪ್ಪಿಗಾಗಿ ನೀವು ಸ್ವತಃ ಪ್ರಾಯಶ್ಚಿತ್ತ ಹೊಂದಬೇಕಾದ ದುರ್ಧರ ಪ್ರಸಂಗ. ಮಿತ್ರತ್ವದಲ್ಲಿ ವಿರೋಧ. ಸ್ಥಾವರದಲ್ಲಿ ನಿಸರ್ಗ ಕೋಪದಿಂದ ಕೆಲಮಟ್ಟಿಗೆ ಹಾನಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ವೆಚ್ಚ ಹೆಚ್ಚು ಆಗಿಯೂ ಯೋಜಿಸಲ್ಪಟ್ಟ ಕೆಲಸಗಳು ನಿಷ್ಫಲವಾಗುವವು. ಪ್ರವಾಸ ಅನುಕೂಲ ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯುದು. ಅಶ್ವಿನಿಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೆ ಚರಣಕ್ಕೆ ಹೆಚ್ಚು ತೊಂದರೆ. ತಾ. ೨೦—೨೧—೨೨ ಅನುಕೂಲ.

### ಕರ್ಕ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲವಿದ್ದರೂ ಉಭಯತರ ಪ್ರೇಮ ದಕ್ಷ ಪ್ರತ್ಯಯ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ವಿಲಕ್ಷಣ ದಗದಗಿ ಯುದು. ಉದ್ಯೋಗದಲ್ಲಿ ಪ್ರಗತಿ ಉತ್ತಮ ಪ್ರತಿಷ್ಠೆ ಅನುಕೂಲವಿದ್ದರೂ ಲಾಭ ಅಷ್ಟಕ್ಕಷ್ಟೆ. ನಿರರ್ಥಕ ಕೆಲಸಗಳಲ್ಲಿ ವೆಚ್ಚ ಬಹಳಾಗಿ ದಿವಾಳಿ ತೆಗೆಯುವದು. ಮಿತ್ರರಿಂದ ಮೋಸ ವಿಪರೀತ ದೊಡ್ಡತನದ ಹುರ್ಪೆಯನ್ನು ಪಾಳಿ ನಿರರ್ಥಕವಾಗಿ ಓಡಾಡಬೇಕಾಗುವದು. ಅಪ್ರದಲ್ಲಿಯ ಹೆಂಗಸರ ಬಗ್ಗೆ ಪಾಪಬುದ್ಧಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೆ ಹೆಚ್ಚು ಜೋರು. ಪ್ರವಾಸಾದಿ ಕೆಲಸ ಕಷ್ಟಸಾಧ್ಯ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷದ ಮೊದಲನೆ ಚರಣಕ್ಕೆ ತೊಂದರೆ ಕಡಮೆ. ತಾ. ೨೦—೨೧—೨೨—೨೪ ಅನುಕೂಲ.

### ಸಿಂಹ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮವೆನಿಸಿದರೂ ಮಕ್ಕಳು ಕೆಲಪೊಂದು ಅನುಚಿತ ಕೆಲಸ ಮಾಡುವರು. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕಸುಖ ಬಹಳ ಕಡಮೆ. ಉದ್ಯೋಗದಲ್ಲಿ ಉತ್ತಮ ಪ್ರಗತಿ. ವಿಶೇಷ ಪ್ರತಿಷ್ಠೆ ಮತ್ತು ತುಂಬ ಲಾಭ. ಅಪ್ತರಿಂದ ಬಹಳ ಕ್ಲೇಶ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಒಡಂಬಡಿಕೆಯ ಸಂಭವ. ಪ್ರವಾಸಾದಿ ಕೆಲಸ ಹಿತಕರ. ಮಘಾದ ಕೊನೆಯ ೩ ಮತ್ತು ಪೂರ್ವಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೩, ೨೪, ೨೫, ೨೬ ಅನುಕೂಲ.

### ಕನ್ಯಾ

ಪ್ರಕೃತಿ ಎಲ್ಲರದೂ ಉತ್ತಮವಿದ್ದರೂ ನಿಮ್ಮ ನಿಮ್ಮಲ್ಲಿ ವಿಪರೀತ ಮತಭೇದವಾಗುವದು. ಪ್ರಿಯ ಜನರ ಸಹವಾಸವುಂಟಾಗುವ ಯೋಗವೂ ಇದೆ. ಉದ್ಯೋಗದಲ್ಲಿ ಒಳ್ಳೆ ಪ್ರಗತಿ. ಮಿತ್ರರಲ್ಲಿ ಹ್ಯಾವ ಹುಟ್ಟುವಷ್ಟು ಪ್ರತಿಷ್ಠೆ ಮತ್ತು ತುಂಬ ಲಾಭ. ಆದರೆ ಕೈಯಲ್ಲಿ ಬರುವ ಲಾಭಕ್ಕಿಂತ ಹೆಚ್ಚು ವೆಚ್ಚವೆ ಧುತ್ತ ಎಂದು ಮುಂದೆ ಬಂದು ನಿಲ್ಲುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಆದರೆ ವೆಚ್ಚ ಮತ್ತು ದಗದಗಿ ಬಹಳ. ಪ್ರವಾಸಾದಿ ಕೆಲಸ ಹಿತಕರ. ಹಸ್ತಾದ ಕೊನೆಯ ೩ ಮತ್ತು ಚಿತ್ರದ ಮೊದಲನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೦, ೨೪, ೨೫, ೨೬ ಅನುಕೂಲ.

### ತುಲಾ

ಪ್ರಕೃತಿ ಉತ್ತಮ. ಉಳಿದ ಪ್ರಾಪಂಚಿಕ ಸುಖ ಸಾಧಾರಣ ಅನುಕೂಲ ಆಗುವದು. ಆದರೆ ಪತಿ ಪತ್ನಿಯರಲ್ಲಿ ಪರಸ್ಪರರಲ್ಲಿಯ ಪ್ರೇಮದ ಬಗ್ಗೆ ಮನಸ್ಸು ಕಲುಷಿತವಾಗುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅಷ್ಟಕ್ಕಷ್ಟೇ ಆಗುವದು. ಆದರೆ ಲಾಭ ಮಾತ್ರ ತುಂಬ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ ಮತ್ತು ಸುಖ ಅನುಕೂಲ. ಪ್ರವಾಸ ಅನುಕೂಲ ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯುದು. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ಮೊದಲನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೧, ೨೨, ೨೬ ಅನುಕೂಲ.

### ವೃಶ್ಚಿಕ

ನಿಮ್ಮ ಪ್ರಕೃತಿ ಅನುಕೂಲವಿದ್ದರೂ ಹೆಂಡತಿಗೆ ಸ್ವಲ್ಪ ಕ್ಲೇಶ. ಮಕ್ಕಳು ಅಪ್ರಿಯರಾಗಿ ನಡೆಯುವರು. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಅಷ್ಟಕ್ಕಷ್ಟೇ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಲಾಭ ಅನುಕೂಲ. ಆದರೆ ಪ್ರತಿಷ್ಠೆ ಮಾತ್ರ ಬಹಳ ಮಟ್ಟಿಗೆ ಕುಂದುವದು. ದೇವಧರ್ಮಗಳ ಬಗ್ಗೆ ಅಶ್ರದ್ಧೆ. ಪ್ರವಾಸ ತೊಂದರೆಯುದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯಪಕ್ಷಗಳು ಹಟಮಾರಿತನದಿಂದ ಹೆಚ್ಚು ಗೊಂದಲವೇಳುವದು. ಭೆಟ್ಟಿ ತೊಂದರೆಯಿಂದ ಲಭಿಸಿದರೂ ಪತ್ರವ್ಯವಹಾರ ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠದ ಮೊದಲನೆ ಚರಣಗಳಿಗೆ ತೊಂದರೆ ಕಡಮೆ. ತಾ. ೨೦, ೨೪, ೨೫ ಅನುಕೂಲ.

### ಧನು

ನಿಮ್ಮ ಪ್ರಕೃತಿ ಅನುಕೂಲವಿದ್ದರೂ ಹೆಂಡತಿ ಮತ್ತು ಮಕ್ಕಳಿಗೆ ಕಿರಕಳ ಸ್ವರೂಪದ ಕಾಯಿಲೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕಸುಖ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಅನುಕೂಲವೆನಿಸಿದರೂ ಪ್ರತಿಷ್ಠೆ ದಿನದಿನಕ್ಕೆ ಕೆಡುತ್ತ ಹೋಗುವದು. ವರಿಷ್ಠರು ಇಲ್ಲವೆ ಆಶ್ರಯದಾತರಲ್ಲಿ ಬಹಳ ಕುರಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಟ್ಟುವದು. ಆದರೆ ಪ್ರತಿಪಕ್ಷಿಗಳಿಗೂ ಬಹಳ ಹಾನಿ. ಪ್ರವಾಸ ಭಲೆಯುದು. ಭೆಟ್ಟಿ ಮತ್ತು ಪತ್ರವ್ಯವಹಾರವೂ ತೊಂದರೆಯುದು. ಮೂಲದ ಕೊನೆಯ ೩ ಮತ್ತು ಪೂರ್ವಾಷಾಢದ ಮೊದಲನೆ ಚರಣಕ್ಕೆ ತೊಂದರೆ ಕಡಮೆ ತಾ. ೨೧, ೨೨, ೨೬ ಅನುಕೂಲ.

### ಮಕರ

ಪ್ರಕೃತಿ ಸಾಧಾರಣವೆ ಹೆಂಡತಿ ಮತ್ತು ಮಕ್ಕಳಿಗೂ ಒಂದಿಲ್ಲೊಂದು ಬಗೆಯ ಕುರಕುರಿ. ಪ್ರಾಪಂಚಿಕ ಸುಖವೂ ದಗದಗಿಯುದು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಮನಸ್ಸಿನಂತೆ. ನೋಕರರಾದರಿಗೆ ಹೆಚ್ಚು ಅನುಕೂಲ ಯೋಗ. ಹೆಂಡತಿಯ ತವರು ಮನೆಯವರಲ್ಲಿ ಒಬ್ಬರಿಗೆ ಬಹಳ ಕ್ಲೇಶ. ಕ್ವಚಿತ್ ವಿಯೋಗವೂ ಆಗಬಹುದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿಯಶಸ್ಸು ಅನುಕೂಲ. ಆದರೆ ಖಾಸಗಿ ವೆಚ್ಚ ಬಹಳ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲವಿದ್ದುದರಿಂದ ಆ ಕಡೆಗೇ ಹೆಚ್ಚು ಲಕ್ಷ್ಯ ಕೊಡಿರಿ. ಶ್ರವಣದ ಕೊನೆಯ ೩ ಮತ್ತು ಧನಿಷ್ಠದ ೧ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨೦, ೨೩, ೨೪ ಅನುಕೂಲ.

### ಕುಂಭ

ಪ್ರಕೃತಿ ಎಲ್ಲರದೂ ಅನುಕೂಲ ಆದರೆ ನಿಮ್ಮ-ನಿಮ್ಮಲ್ಲಿ ಜಗಳ ಹೆಚ್ಚಿ ಒಬ್ಬರಿಂದ ಮತ್ತೊಬ್ಬರಿಗೆ ಬಹಳ ತೊಂದರೆ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಪ್ರತಿಷ್ಠೆ ಸಾಧಾರಣ ಅನುಕೂಲ. ಆದರೆ ಲಾಭಕ್ಕಿಂತ ವೆಚ್ಚಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ವಿಲಕ್ಷಣ ಸ್ವಪ್ನಗಳು. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಭಾದ್ರಪದದ ಮೊದಗನೆ ಚರಣಕ್ಕೆ ತೊಂದರೆ ಹೆಚ್ಚು ತಾ. ೨೦—೨೧—೨೨ ಅನುಕೂಲ.

### ಮೀನ

ಎಲ್ಲರ ಪ್ರಕೃತಿ ಅನುಕೂಲವಿದ್ದರೂ ನಿಮ್ಮ ನಿಮ್ಮಲ್ಲಿ ಕ್ಷಣಮಾತ್ರವೂ ಕೂಡಿಬರುವದಿಲ್ಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮವಿದ್ದರೂ ಲಾಭ ಕಡಿಮೆಯೇ. ಮಿತ್ರರಲ್ಲಿ ವಿರೋಧ. ವಾದದಲ್ಲಿ ಮತ್ತುಸ್ಪರ್ಧೆಯಲ್ಲಿ ಒಳ್ಳೆ ಅನುಕೂಲತೆ. ಸ್ಥಾವರದಲ್ಲಿ ಹಿತಕರ ಘಟನೆಗಳು ಪ್ರವಾಸಾದಿ ಕೆಲಸಗಳೂ ಹಿತದಾಯಕ. ಉತ್ತರಾ ಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧.೨೨.೨೪.೨೫ ಅನುಕೂಲ.

## 'ಮಂಗರಸ' ನಿಗೆ ಶಿಕ್ಷೆ



ಆಫ್ರಿಕದ ಈ ಚಿಂಪಾಂಜಿ ರಾಜನು ಒಮ್ಮೆ ಮನುಷ್ಯರ ವ್ಯವಹಾರವನ್ನು ಕದ್ದು ಕಂಡು ವಿಸ್ಮಿತನಾದನು. ಅನಂತರ ಒಮ್ಮೆ ಒಂದು ಐರೋಪ್ಯರ ಗುಂಪು ಬೀಡು ಬಿಟ್ಟಿದಾಗ ತನ್ನ ನೆಯ ಕಲೆಯನ್ನು ಪ್ರಯೋಗಿಸಿ ಅಲ್ಲಿದ್ದ ಒಂದು ಸಿಗರೇಟನ್ನೂ ಬೆಂಕಿಯ ಪೆಟ್ಟಿಗೆಯನ್ನೂ ಕರುವ ಸಾಹಸ ಮಾಡಿದನು. ಮರದ ಮೇಲಿನ ದೇವರೆನಿಸಿದ ಈತನು ವೃಕ್ಷಾರೋಹಣ ಮಾಡಿ ತನ್ನ ಗದ್ದುಗೆಯ ಮೇಲೆ ಕುಳಿತು ಕಡ್ಡಿ ಕೆರೆದು ಸಿಗರೇಟನ್ನು ಹೊತ್ತಿಸಿ ಸೇದಲಾರಂಭಿಸಿದನು. ಅದನ್ನು ಕಂಡ ಐರೋಪ್ಯರು ಆ ಕೂಡಲೇ ಅವನನ್ನು ಸುತ್ತುಗಟ್ಟಿ ಸೆರೆಹಿಡಿದು ನ್ಯಾಯಾಲಯಕ್ಕೆ ಒಯ್ದರು. ನ್ಯಾಯಾಧೀಶ ಮಹಾಶಯನು "ಮಂಗರಸನು" ಅಪರಾಧಿಯೆಂದು ವಿಚಾರಣೆಯ ನಂತರ ತೀರ್ಮಾನಿಸಿ ಶಿಕ್ಷೆಗೆ ಗುರಿಪಡಿಸಿದನು! ಮನುಷ್ಯನು ತನ್ನ ಕೋರ್ಟಿನಲ್ಲಿ ತನ್ನ ತಂದೆಗೇ (ಡಾರ್ವಿನ್ನನ ಪ್ರಕಾರ) ಶಿಕ್ಷೆ ವಿಧಿಸಿದ್ದು ಈ ಅಪೂರ್ವ ಸಂದರ್ಭ ನಿದರ್ಶಿಸುತ್ತದೆ.

---

ಭಾರತವನ್ನು ಸಂದರ್ಶಿಸದಿದ್ದರೂ ಅದರ ಇತಿಹಾಸಧಾರಿಗೆ ನೀರೆರೆದ ಆಕ್ಸಫರ್ಡಿನ ಪ್ರಸಿದ್ಧ ಇತಿಹಾಸ ಕೋವಿದ ಶ್ರೀ ಪಿ. ಈ. ರಾಬರ್ಟ್ಸರು ತೀರಿಕೊಂಡರು.

---

## ನನ್ನನ್ನು ಬಯಸಿದ ಹುಡುಗಿ

[ ೫ ನೆಯ ಪುಟದಿಂದ ]

"ನನ್ನ ಮೇಲೆ ಕೋಪ.... "

ಎಂದು ನಾನು ಹೇಳುತ್ತಿರುವಷ್ಟರಲ್ಲಿಯೇ ಅಲಿಸ್ ಮುಂದೆ ನೆಗೆದು ಹೋದಳು.

ಹುಚ್ಚು ಹಿಡಿದಂತಾಯಿತು ನನಗೆ. ಅವಳ ಕೈಹಿಡಿದು ಎಳೆದು ಹೇಳಿದೆ: "ಇಗೋ ನಿನ್ನ ಮಾತಿಗೊಪ್ಪಿದೆ. ಈಗಲೇ ಹೋಗೋಣ, ಬಾ!"

ಅವಳು ಚಕಿತಳಾದಳು. ನಾನು ಇಷ್ಟು ಬೇಗನೆ, ಇಷ್ಟು ಸುಲಭದಲ್ಲಿ ಅವಳಿಗೆ ಬಾಗಿಯೇನೆಂದು ಅವಳು ಭಾವಿಸಿರಲಿಲ್ಲ, ಅವಳ ಈ ಪರಿವರ್ತಿತ ಮಾಟ ನನ್ನನ್ನೆಷ್ಟು ನ್ಯೂನವಾಗಿ ಮಾಡಿತ್ತೆಂದು ಅವಳಿಗೆ ಹೇಗೆ ತಾನೇ ತಿಳಿದಿರಬೇಕು?

"ಆಯಿತು ಹೊರಟೆ. " ಎಂದು ನನ್ನನ್ನು ಹಿಂಬಾಲಿಸಿದಳು.

"ನಿನ್ನ ಮದುವೆ, ನಿಶ್ಚಯ ಎಲ್ಲಿ? " ನಾಲ್ಕೆಂಟು ಹೆಜ್ಜೆ ದಾಟಿದ ಮೇಲೆ ಕೇಳಿದೆ.

"ಅದೆಲ್ಲ ನಿಮಗೇಕೆ? ಎಂದಳು.

ಎಲ್ಲಿಗೆ ಹೋಗುವುದು, ಏನು ಮಾಡುವುದು ಎಂಬ ಯಾವ ಪರಿಜ್ಞಾನವೂ ನನ್ನಲ್ಲಿರಲಿಲ್ಲ. ಅದೆಂದೂ ಅವಳ ಮೇಲೆಯೂ ನಾನು ಹುಚ್ಚನಾಗಿರಲಿಲ್ಲ. ಆದರೆ ನಾನೇನೋ ಋಣ ಸಲ್ಲಿಸಲಿಕ್ಕಾಗಿ ಹಾಗೆಲ್ಲ ಮಾಡುತ್ತಿದ್ದೇನೆ ಎಂದು ನನಗೆ ತೋರುತಿತ್ತು. ಎಲ್ಲ ಬಿಟ್ಟು ಇದೆಂಥ ಹೊಣೆಗಾರಿಕೆಯನ್ನು ಹೀಗೆ ವಹಿಸಿಕೊಂಡಿದ್ದೇನೆಂದು ಕೂಡಲೆ ತಿಳಿಯಲಿಲ್ಲ.

ಅಷ್ಟೆಲ್ಲ ವಿವೇಚಿಸಲು ಸಮಯವೂ ಸಾಕಷ್ಟಿರಲಿಲ್ಲ. ಒಂದು ಗದ್ದೆಯನ್ನು ದಾಟಿ ಇನ್ನೊಂದು ಗದ್ದೆಯ ಅಂಚಿಗೆ ಹೋಗುವಾಗ ಎದುರಿನಿಂದ ಜುವಾಂಪೀಂತ ಮತ್ತೊಬ್ಬನೊಡನೆ ಬರುತಿದ್ದ. ಇದೂ ಒಂದು ವಿಸ್ಮಯ.

"ಹ್ಞ ಮಹಾರಾಯರೇ, ಇಗೊಳ್ಳಿ ಇವರು ನನ್ನ ಭಾವೀ ಭಾವ, ಅಲಿಸಳ ಗಂಡನಾಗುವವರು" ಎನ್ನುತ್ತ ಅವನೊಟ್ಟಿಗಿದ್ದವನ ಪರಿಚಯಮಾಡಿಸಿದ. ಅವನು ಕೈಮುಂದೆ ಚಾಚಿದ. ನಾನು ಅದನ್ನು ಕುಲುಕಿದೆ.

"ಮನೆಗೆ ಹೋಗುವವರಾಗಿರಬೇಕು, ಬನ್ನಿ ಹೋಗೋಣ" ಎಂದು ಜುವಾಂಪೀಂತ ಪುನಃ ಹೇಳಿದ.

"ಇಲ್ಲ, ನನಗೆ ಇವತ್ತು ಸ್ವಲ್ಪ ಕೆಲಸವಿದೆ. ಮನೆಗೇನೋ ಹೋಗಿ ಬಂದೆ. ನಾಳೆ ಬರುತ್ತೇನೆ, ಅವಶ್ಯ"

ಎನ್ನುತ್ತ ನಾನು ಅವರನ್ನು ದಾಟಿ ಮುಂದು ವರಿದೆ.

ಅಲಿಸ್ ನನ್ನನ್ನು ಇನ್ನೂ ಹಿಂಬಾಲಿಸುತ್ತಿರುವಳೋ ಎಂದು ನಾನು ಮತ್ತೆ ನೋಡಲಿಲ್ಲ. ನೋಡುವಷ್ಟರ ಧೃತಿಯೂ ಮತ್ತೆ ನನ್ನಲ್ಲಿ ಉಳಿದಿರಲಿಲ್ಲ.

---



---

**ಹರಿಜನ ಲೇಖ** ಅಗ್ರಲೇಖ

# ಆತ್ಮಘಾತಕ ಬೇಡಿಕೆ

ತನ್ನ ಪ್ರಾಂತದಲ್ಲಿ ಒಳ್ಳೆಯ ಸ್ಥಾನ ಪಡೆದ ಪತ್ರಕರ್ತನೊಬ್ಬನಿಗೆ (ವಿಲೀನ ಸಂಸ್ಥಾನಗಳ ಒಂದು ಒಕ್ಕೂಟವಾದ) ತನ್ನ ಪ್ರಾಂತದ ಸಾರ್ವಜನಿಕ ವ್ಯವಹಾರಗಳ ಬಗ್ಗೆ ಅತ್ಯಂತ ಅತೃಪ್ತಿಯುಂಟಾಗಿದೆ ಮತ್ತು ಸದ್ಯದ ಮಂತ್ರಿಮಂಡಲಕ್ಕೆ ಆಡಳಿತ ನಡೆಸಲು ಬಿಡುವುದಕ್ಕಿಂತ ಕೇಂದ್ರ ಸರಕಾರವು ನೇರವಾಗಿ ತನ್ನ ವಶಕ್ಕೆ ಆ ಪ್ರಾಂತದ ಆಡಳಿತೆಯನ್ನು ತೆಗೆದುಕೊಂಡರೆ ಉತ್ತಮ ಎಂದು ಬರೆಯುತ್ತಾನೆ. ಕೆಲ ಮಂತ್ರಿಗಳು ಕಾರ್ಯದಕ್ಷರಲ್ಲ, ತಮ್ಮ ಅಧಿಕಾರಿಗಳನ್ನೂ ಇತರರನ್ನೂ ಅಂಕೆಯೊಳಗಿಟ್ಟುಕೊಳ್ಳಲು ಶಕ್ತರಲ್ಲ, ಅವರಿಗೆ ಸಾರ್ವಜನಿಕ ಸೇವಾ ಬುದ್ಧಿಯಿಲ್ಲ ಎಂದು ಅವನ ವಿಚಾರ.

ಪತ್ರಕರ್ತನ ಪ್ರಾಂತದ ಸರಕಾರದ ಬಗ್ಗೆ ಅವನು ಕೊಟ್ಟ ಅಭಿಪ್ರಾಯದ ಯೋಗ್ಯತೆಯನ್ನು ವಿವೇಚಿಸಲು ನಾನು ಬಯಸುವುದಿಲ್ಲ. ಆದರ ಬಗ್ಗೆ ನನ್ನ ವೈಯಕ್ತಿಕ ಅಭಿಮತವು ಉತ್ತಮವಾಗಿದ್ದರೂ ಮಂತ್ರಿಮಂಡಲವು ಅತನು ಬಣ್ಣಿಸಿದ್ದಕ್ಕಿಂತಲೂ ಕೀಳ್ತರಗತಿಯದೆಂದು ಭಾವಿಸೋಣ. ಆ ಕಾರಣದಿಂದ ಅದು ಮನೆಗೆ ಕಳಿಸಲು ಯೋಗ್ಯವಾಗಿದೆ ಎನ್ನೋಣ. ಹಾಗಿದ್ದರೂ ಹೊಣೆಗಾರನಾದ ಯಾವ ನಾಗರಿಕನೂ ತನ್ನ ಪ್ರಾಂತದ ಆಡಳಿತೆಯನ್ನು ಕೇಂದ್ರ ಸರಕಾರ ವಹಿಸಿಕೊಂಡು ಒಬ್ಬ ಆಡಳಿತೆಗಾರನಿಗೆ ಒಪ್ಪಿಸಬೇಕೆಂದು ಅಪೇಕ್ಷಿಸಬಾರದು, ಬೇಡಬಾರದು. ೯೩ ನೆಯ ಕಲಮಿನ ಆಡಳಿತೆ ಇಲ್ಲವೆ ಮಿಲಿಟರಿ ಅಥವಾ ಮುಲ್ಕಿ ಆಡಳಿತೆಗಾರರನ್ನು ವಿನಿಮಯಿಸಿಕೊಳ್ಳುವುದಕ್ಕಾಗಿ ನಾವು ಕಾಲು ಶತಮಾನದ ವರೆಗೆ ಬ್ರಿಟಿಶ್ ಸರಕಾರ ಮತ್ತು ಸಂಸ್ಥಾನಿಕರ ವಿರುದ್ಧವಾಗಿ ಹೋರಾಡಲಿಲ್ಲ. ಈ ಮಾದರಿಯ ಸರಕಾರವು ಬ್ರಿಟಿಶರ ಆಳಿಕೆಯಲ್ಲಿ ಸುವಿದಿತವಾಗಿತ್ತು ಮತ್ತು ಎಷ್ಟೋ ವೇಳೆ ದಕ್ಷವೂ ಹಿಂದಿನದಕ್ಕಿಂತ ಉತ್ತಮವೂ ಎನಿಸಿತ್ತು. ಅದರದು ಪ್ರಜಾಪ್ರಭುತ್ವವಾಗಿರಲಿಲ್ಲ. ನಾವು ಉದ್ದೇಶಪೂರ್ವಕವಾಗಿ ಪ್ರಜಾಸತ್ತಾತ್ಮಕ ಸರಕಾರಗಳನ್ನು ಸ್ಥಾಪಿಸಲು ಬಯಸಿದೆವು, ಅಂದರೆ ನಮ್ಮಿಂದ ಆಯ್ಕೆ ಹೊಂದಿದ ಜನರ ಮೂಲಕ ನಮ್ಮ ವ್ಯವಹಾರವನ್ನು ನಡೆಸಿಕೊಳ್ಳಬೇಕೆಂದು ಬಗೆದೆವು. ಸುರಾಜ್ಯವೆಂದೂ ಸ್ವರಾಜ್ಯಕ್ಕೆ ಎಣೆಯಲ್ಲ ಎಂದು ನಾವು ಯಾವಾಗಲೂ ಹೇಳಿದೆವು; ನಾವು ತಪ್ಪು ಮಾಡಿದರೂ ಚಿಂತೆಯಿಲ್ಲ, ನಮಗೆ ಸ್ವರಾಜ್ಯಭಾರವೇ ಬೇಕು ಎಂದೆವು. ಹಾಗೆ ಕೇಳಿದರೆ, ತಪ್ಪು ಮಾಡಲು ನಮಗೆ ಹಕ್ಕು ಬೇಕೆಂದೇ ನಾವು ಕೇಳಿದೆವು. ಚಿಕ್ಕ ಹಳ್ಳಿಯನ್ನು ಕೂಡ ಸ್ವಾಯತ್ತವನ್ನಾಗಿ ಮಾಡುವುದೇ ನಮ್ಮ ಗುರಿಯಾಗಿತ್ತು; ಅಂದರೆ, ಹಳ್ಳಿಗರೇ ಅರಿಸಿದ ಜನರು ಅವರ ವ್ಯವಹಾರವನ್ನು ನಿರ್ವಹಿಸುವುದು ಎಂದು.

ಕೇಂದ್ರ ಸರಕಾರದಿಂದ ನಿಯುಕ್ತನಾದ ಆಡಳಿತೆಗಾರನನ್ನು ಬೇಡಿದರೆ ನಿರಂಕುಶ ಆಡಳಿತೆಗೆ ಪುನಃ ಮರಳಿದಂತಾಗುವುದು. ಆಡಳಿತೆಗಾರನು ಪ್ರಾಂತದ ಜನರಿಗೆ ಹೊಣೆಯಾಗಿರುವುದಿಲ್ಲ.

ಚೆನ್ನಾಗಿ ಆಳಲ್ಪಡಲಿ, ಕೆಟ್ಟುದಾಗಿ ಆಳಲ್ಪಡಲಿ— ನಾವು ನಮ್ಮಿಂದ ಆಳಲ್ಪಡುವುದೇ ಇರಲಿ ಎಂದು ಒತ್ತಿ ಹೇಳಬೇಕು. ಮೊಟ್ಟ ಮೊದಲು ತಾವು ತಾಳ್ಮೆಯಿಂದಿರೋಣ. ಮಂತ್ರಿಗಳು ಹೊಸಬರು, ಅವರ ಕೆಲಸ ಬಹಳ ಕಠಿನವೂ ಭಾರವುಳ್ಳದ್ದೂ ಆಗಿದೆ; ಅವರಾಗಲಿ, ಜನರಾಗಲಿ ಸಾಕಷ್ಟು ಅನುಭವಶಾಲಿಗಳಲ್ಲ. ಸ್ವತಂತ್ರ ದೇಶದ ಜನರ ಮೇಲೆ ಬೀಳುವ ಭಾರವಾದ ಹೊಣೆಗಾರಿಕೆಯನ್ನು ನಾವಿನ್ನೂ ಸಾಕಷ್ಟು ಅರ್ಥ ಮಾಡಿಕೊಂಡಿಲ್ಲ. ಹೊಣೆಗಳನ್ನು ಹೊತ್ತು ನಿರ್ವಹಿಸುವ ಪ್ರಯತ್ನ ಕೂಡ ಬಹಳ ದುರ್ಬಲವಾಗಿದೆ. ಇಷ್ಟೆಲ್ಲ ಅಲ್ಲದೆ ಅಧಿಕಾರ ಲಾಲಸೆಯ ರಾಜಕಾರಣ ವಾತಾವರಣವನ್ನೇ ಹೊಲೆಗೆಡಿಸಿಬಿಟ್ಟಿದೆ; ಅದರಿಂದುಂಟಾದ ಸಮಸ್ಯೆಗಳತ್ತ ಲಕ್ಷ್ಯ ಹಾಕುವುದರಲ್ಲೇ ಮಂತ್ರಿಗಳ ಹೆಚ್ಚಿನ ವೇಳೆ ಮತ್ತು ಶಕ್ತಿ ವ್ಯಯವಾಗುತ್ತದೆ. ಅವರಿಗೆ ನಾವು ಸ್ವಲ್ಪ ಕಾಲಾವಕಾಶವನ್ನು ಕೊಡೋಣ, ಜನರಿಗೆ ಶಿಕ್ಷಣ ಕೊಡೋಣ; ಅವರ ನೀತಿಬುದ್ಧಿಯನ್ನು ಎಚ್ಚರಿಸೋಣ; ಅದರಿಂದ ಪರಿಸ್ಥಿತಿ ಸುಧಾರಿಸುವುದು. ಆದರೆ ನಮ್ಮ ಸಹನೆ ಪೂರ್ತಿಯಾಗಿ ಬತ್ತಿಹೋಗಿ ಮಂತ್ರಿಮಂಡಲ ಅಯೋಗ್ಯವೆಂದು ನಮಗೆ ಖಾತ್ರಿಯಾದರೆ ಒಂದು ಜನತೆಗೆ ಸಾಧ್ಯವಿರುವ ಎಲ್ಲ ಮದ್ದುಗಳನ್ನು ನಾವು ಮಾಡೋಣ. ನಾವು ಚಳವಳಿ ಹೂಡಿ ಜನಮತವನ್ನು ಸಂಘಟಿಸಬಹುದು, ಮಂತ್ರಿಮಂಡಲದ ಕೃತ್ಯಗಳನ್ನು ಹೀಗಳೆಯಬಹುದು, ಅವಿಶ್ವಾಸದ ಮತವನ್ನು ಸ್ವೀಕರಿಸಬಹುದು, ಹೊಸ ಚುನಾವಣೆಯನ್ನು ಕೇಳಬಹುದು, ಮತ್ತು ಇತರ ಘಟನಾತ್ಮಕವಾದ ಕ್ರಮಗಳನ್ನು ತೆಗೆದುಕೊಳ್ಳಬಹುದು: ಇವು ಸಾಕಾಗದಿದ್ದಲ್ಲಿ ನಾವು ಇತರ ಅಹಿಂಸಾತ್ಮಕ ಪದ್ಧತಿಗಳನ್ನೂ ಅನ್ವಯಿಸಬಹುದು; ಕರನಿರಾಕರಣೆ ಮತ್ತು ಅಸಹಕಾರಗಳವರೆಗೂ ನಾವು ಹೋಗಬಹುದು. ಅಂಥ ಅತಿರೇಕದ ಚಳವಳಿಯನ್ನು ಸಂಘಟಿಸುವುದು ಅಥವಾ ವಿವೇಚಿಸುವುದು ಅವಶ್ಯಕವೆಂದು ನಾನು ಪುರಸ್ಕರಿಸುತ್ತಿರುವೆನೆಂದು ಯಾರೂ ತಿಳಿದುಕೊಳ್ಳದಿರಲಿ. ಕಡೆಯ ಅಸ್ತ್ರಗಳಾಗಿ ಒಂದು ಪ್ರಾಂತದ ನಾಗರಿಕರಿಗೆ ಉಳಿದಿರುವ ಮಾರ್ಗಗಳಾವುವೆಂಬುದನ್ನು ತೋರಿಸುವುದಕ್ಕಷ್ಟೇ ನಾನು ಇವನ್ನು ಹೇಳಿದ್ದೇನೆ. ಆದರೆ ಒಬ್ಬ ಮಿಲಿಟರಿ ಅಥವಾ ಮುಲ್ಕಿ ಅಧಿಕಾರಿಯಿಂದ ಆಳಿಸಿಕೊಳ್ಳಬೇಕೆಂದು ಬೇಡುವುದು ಆತ್ಮಘಾತಕವಾದುದು. ಅದು ಒಂದು ವಿಧದ ಮಿಲಿಟರಿ ಅಥವಾ ಅರೆಮಿಲಿಟರಿ ಆಳಿಕೆಯತ್ತ ಒಯ್ಯದೇ ಎಂದೂ ಬಿಡದು.

ಕೆಟ್ಟ ಆಡಳಿತೆ ನಡೆದಾಗ ಒಂದು ಪ್ರಾಂತದ ಜನರು ಕೇಂದ್ರ ಸರಕಾರದ ಕಡೆ ಮಧ್ಯಸ್ಥಿಕೆ ವಹಿಸಿ ತಂಟೆಯನ್ನು ಬಗೆಹರಿಸಲು ಅರಿಕೆ ಮಾಡಿಕೊಳ್ಳಬಹುದು. ಕೇಂದ್ರದ ಮಂತ್ರಿಮಂಡಲವೇ ಅಯೋಗ್ಯವೆನಿಸಿ ಕೆಟ್ಟ ಆಡಳಿತೆ ನಡೆಸಿದಾಗ ಇಡಿ ದೇಶವು ಯಾರ ಹತ್ತಿರ ಮೊರೆಯಿಡಬೇಕು? ಸುರಾಜ್ಯವನ್ನು, ಒಳ್ಳೆಯ ಆಡಳಿತೆಯನ್ನು ರೂಪಿಸುವುದರಲ್ಲಿ ನಮ್ಮ ಪ್ರಾಂತದ ಜನರನ್ನೇ ನಾವು ನಂಬಲಾರೆವಾದರೆ ಹಾಗೆ ಮಾಡುವಲ್ಲಿ ಕೇಂದ್ರವನ್ನೂ ನಾವು ನಂಬಲಾರೆವು. ಆಗ ನಾವು ಯಾವುದಾದರೊಂದು ಪರಪ್ರಭುತ್ವವನ್ನು ಕರೆದು ನಮ್ಮ ದೇಶದ ಆಳಿಕೆಯನ್ನು ವಹಿಸಿಕೊಳ್ಳಲು ಹೇಳೋಣವೆ? ಹಿಂದೆ ಇದನ್ನೇ ಅನೇಕ ಸಲ ಮಾಡಿದರು; ಒಂದೇ ಒಂದು ಕಾಳೆಗದಲ್ಲಿ ಅಥವಾ ಅದೂ ಇಲ್ಲದೆ ಅವರು ಇಡಿ ಪ್ರದೇಶವೊಂದನ್ನು ಪರರಿಗೆ ಒಪ್ಪಿಸಿಕೊಟ್ಟರು. ನಾವು ಅಂಥ ಮೃತ್ಯುಸ್ವರೂಪದ ಅಪರಾಧವನ್ನು ಮತ್ತೆ ಮಾಡದಿರೋಣ. ನಾವು ಸುಖದಲ್ಲಿರಲಿ ದುಃಖದಲ್ಲಿರಲಿ, ಚೆನ್ನಾಗಿ ಆಳಲ್ಪಟ್ಟಿರಲಿ ಕೆಟ್ಟರೀತಿಯಿಂದ ಆಳಲ್ಪಟ್ಟಿರಲಿ, ನಮ್ಮಿಂದ ನಾವು ಆಳಲ್ಪಡುವ ಪದ್ಧತಿಯಿಂದ ಎಂದೆಂದೂ ವಿಚಲಿತರಾಗಕೂಡದು, ಆ ನಿರ್ಧಾರವನ್ನು ಬಿಟ್ಟು ಅಡ್ಡಹಾದಿ ಹಿಡಿಯಕೂಡದು. ಆಡಳಿತೆಯನ್ನು ಉತ್ತಮಗೊಳಿಸುವದಕ್ಕಾಗಿ ನಾವು ನಮ್ಮ ಪ್ರತಿನಿಧಿನಾಡಿಯನ್ನೂ ಸವೆಯಿಸಬೇಕು. ಮತ್ತು ಅದೇ ಬಗೆಯಿಂದ ದುಷ್ಟ ಸರಕಾರವನ್ನು ಉರುಳಿಸಬೇಕು; ಆದರೆ ಅದನ್ನು ನಾವು ನಮ್ಮದೇ ಆದ ಪ್ರಜಾಸತ್ತಾತ್ಮಕ ಪ್ರಯತ್ನದಿಂದ ಮಾಡಬೇಕು. ಮೇಲಿನ ಸರಕಾರವೊಂದು ಬಂದು ನಮ್ಮ ಮೇಲೆ ಅಧಿಕಾರ ನಡೆಸುವುದನ್ನು ನಾವು ಬೇಡದಿರೋಣ.

ವರ್ಧಾ ಕಿ. ಘ. ಮಶ್ರುವಾಲಾ
೯-೬-೪೯

## ವಾರದ ಬಿಡುವು

"ಹರಿಜನ"ವನ್ನು ಪುನಃ ಪ್ರಾರಂಭಿಸಿದಂದಿನಿಂದಲೂ ಈಗಿನ ಆದಿತ್ಯವಾರದ ಬದಲು ಶುಕ್ರವಾರವನ್ನು ಭಾರತದ ಸಾಪ್ತಾಹಿಕ ಬಿಡುವಿನ ದಿನವನ್ನಾಗಿ ನಿರ್ಧರಿಸಲು ಪುರಸ್ಕರಿಸಬೇಕೆಂದು ಪದೇ ಪದೇ ನನಗೆ ಸಲಹೆ ಬಂದಿದೆ. ಘಟನೆಯನ್ನೀಗ ಚುರುಕಿನಿಂದ ಪರಿಶೀಲಿಸುತ್ತಿರುವುದರಿಂದ ಆ ಸಲಹೆಯನ್ನು ಪುನಃ ಮಾಡಲಾಗಿದೆ: ಅಂಥ ಬದಲಾವಣೆಯನ್ನ ಮುಸಲ್ಮಾನರು ಮೆಚ್ಚುವರೆಂದು ಒಬ್ಬ ಮುಸಲ್ಮಾನ ಪತ್ರಕರ್ತ ಬರೆಯುತ್ತಾನೆ. ಅದು ಗಾಂಧಿಯವರ ಜೀವ ತೆಗೆದ ದಿನವೆಂದು ಒಬ್ಬ ರಾಷ್ಟ್ರೀಯವಾದಿ ಒಮ್ಮೆ ಬರೆದಿದ್ದ. ಧರ್ಮಾಭಿಮಾನಿಯೊಬ್ಬ ಅದು ಯೇಸುವನ್ನು ಶಿಲುಬೆಗೇರಿಸಿದ ದಿನ ಎಂದು ಹೇಳಿದ. ಈಗ ನಾವು ಸ್ವತಂತ್ರರಾಗಿರುವುದರಿಂದ ನಮ್ಮದೇ ಆದ ಬಿಡುವಿನ ದಿನ ನಮಗಿರಬೇಕೆಂದು ಒಬ್ಬ ಸ್ವರಾಜ್ಯವಾದಿ ಬರೆದ.

ಈ ಸಂಗತಿಗಳು ಸ್ವತಃ ನನಗೆ ಅಷ್ಟೇನೂ ಮಹತ್ವದವೆನಿಸುವುದಿಲ್ಲ. ತಡವಾಗಿ ಏಳಲು, ಹೆಚ್ಚಾಗಿ ತಿನ್ನಲು, ಹರಟೆ ಹೊಡೆಯಲು, ಆತಿ ಮಗ್ನತೆಯುಳ್ಳಿರಲು ಒಂದು ದಿನ ಬೇಕಾದರೆ ಸದ್ಯದ ಆದಿತ್ಯವಾರವನ್ನೇ ಅದಕ್ಕಿಟ್ಟುಕೊಳ್ಳುವುದು ಉತ್ತಮ. ಪ್ರತಿಯೊಂದು ಬಗೆಯಲ್ಲೂ ಮಿಕ್ಕ ರಾಷ್ಟ್ರಗಳಿಂದ ಭಿನ್ನವಾಗಿ ತೋರಬೇಕೆಂಬ ಬಯಕೆಯನ್ನು ನನ್ನ ಸ್ವಾತಂತ್ರ್ಯ ಕಲ್ಪನೆ ನನ್ನ ಮನದಲ್ಲಿ ಹುಟ್ಟಿಸುವುದಿಲ್ಲ. ಅದರ ಬದಲು, ಸಾಧ್ಯವಾದಷ್ಟು ಮಟ್ಟಿಗೆ ಅನೇಕ ಸಂಗತಿಗಳಲ್ಲಿ ಮಿಕ್ಕ ಜಗತ್ತಿನೊಡನೆ ಸತ್ಯ, ಸದ್ಗುಣ ಮತ್ತು ಸದಾಚಾರಗಳ ತತ್ವಗಳಿಗೆ ಧಕ್ಕೆ ಬರದ ಎಲ್ಲೆಡೆಯಲ್ಲೂ ಏಕವಾಗಿರಬೇಕೆಂದೇ ನಾನು ಹೇಳತಕ್ಕವನು.

ಅದು ಎಂತಾದರೂ ಇರಲಿ. ಜಗತ್ತಿನ ಎಲ್ಲ ದೇಶಗಳಲ್ಲೂ ಆದಿತ್ಯವಾರ ಬಿಡುವಿನ ದಿನವೆನಿಸಿಲ್ಲ. ನಮ್ಮ ಜನರು ಶುಕ್ರವಾರವನ್ನು ಬೇಡಿದರೆ ಈ ನಿರಪಾಯಕರ ಬೇಡಿಕೆಯನ್ನು ಪೂರಯಿಸದಿರಲು ಯಾವ ಕಾರಣವೂ ಇಲ್ಲ. ಘಟನಾ ಸಮಿತಿಯ ಯಾವನಾದರೊಬ್ಬ ಸದಸ್ಯ ಈ ವಿಷಯವನ್ನು ತೆಗೆದುಕೊಂಡಾನೆಂದು ಆಶಿಸುತ್ತೇನೆ.

ಆದರೆ ಈ ಬದಲಾವಣೆಯನ್ನು ಮಾಡಿದರೆ ಅದನ್ನು ಬೇಡಿದ ಎಲ್ಲರೂ ಅದು ಪವಿತ್ರ ದಿನ; ಸ್ವೈರ ಭೋಗದ ದಿನವಲ್ಲ— ಎಂಬುದನ್ನು ನೆನಪಿನಲ್ಲಿಟ್ಟುಕೊಂಡಿರಲಿ—

ವರ್ಧಾ, ೪-೬-೪೯ —ಕಿ. ಘ. ಮ.

## ಅಪರಾಧಿಕುಲಕ್ಕೆ ಸೇರಿದವರು

[ಶ್ರೀಮತಿ ರಾಮೇಶ್ವರಿ ನೆಹರು ಅವರ ಸಲಹೆಯ ಮೇರೆಗೆ ಪೂರ್ವಪಂಜಾಬು ಮತ್ತು ಪೆಪ್ಸುಗಳ ಪ್ರಾದೇಶಿಕ ಅಧಿಕಾರಿಗಳಾದ ಶ್ರೀ ಸೋಮನಾಥ ಧಾರರು "ಅಪರಾಧಿ ಕುಲಿಕರು" ಎನಿಸಿದ ಪೂರ್ವ ಪಂಜಾಬಿನ ಸ್ಥಾನಭ್ರಷ್ಟ ಒಕ್ಕಲಿಗರ ಅನೇಕ ವಸತಿಸ್ಥಳಗಳನ್ನು ಸಂದರ್ಶಿಸಿದರು. ಈ ಕೆಳಗಿನ ಟಿಪ್ಪಣಿ ಅವರ ಉದ್ದ ವರದಿಯನ್ನು ಆಧರಿಸಿದೆ.—ಸಂ.]

೧೯೪೯ ರ ಮೇ ೧೦ ರಿಂದ ೧೩ ರ ವರೆಗೆ ಗುಮ್ತಲಗರು ಮತ್ತು ಬರ್ತಬರಿ ಎಂಬೆರಡು ವಸತಿಸ್ಥಳಗಳನ್ನು ಸಂಚರಿಸಿದೆ. ಮೊದಲನೆಯದರಲ್ಲಿ ಒಂದು ವರ್ಷಕ್ಕಿಂತ ಹೆಚ್ಚಿನ ಕಾಲದಿಂದಲೂ ಅಲ್ಲಿಯ ೯೯ ಕುಟುಂಬಗಳಲ್ಲಿಯ ಒಂದು ವ್ಯಕ್ತಿಯ ಮೇಲೂ ಫೌಜದಾರಿ ಖಟ್ಲೆ ಹಾಕಿಲ್ಲ ಎಂದು ಪೋಲೀಸರಿಂದ ತಿಳಿದು ಬಂದಿತು. ಅದರೂ ಪೂರ್ವ ಪಂಜಾಬಿನ ಅಪರಾಧಿಕುಲಗಳ ಡೆಪ್ಯುಟಿ ಕಮಿಶನರರು ಪರಿಪತ್ರದ ಮೇರೆಗೆ ಅವರ ಚಲನವಲನಗಳನ್ನು ಉಗ್ರವಾಗಿ ಹಿಡಿತದಲ್ಲಿಡುವ ಪ್ರತಿಬಂಧಕಗಳನ್ನು ಹೆಚ್ಚಿಸಲಾಗಿದೆ. ಈ ಕಾಯದೆಗೆ ಹೊರತುಮಾಡಲ್ಪಟ್ಟ ಸ್ವತಂತ್ರರೆನಿಸಿದ ಅರು ಜನರನ್ನೂ ಪುನಃ ಪೋಲೀಸರ ಹಾಜರಿಪಟ್ಟಿಗೆ ದಾಖಲೆಮಾಡಲಾಗಿದೆ.

ಬರ್ತಬರಿಯು ಅಪರಾಧಿಕುಲಿಕರೆನಿಸಿಕೊಂಡವರಿಗಾಗಿಯೇ ವಿಶೇಷತಃ ನಿರ್ಮಿಸಲಾದ ಶಿಬಿರಗಳಲ್ಲಿ ವಾಸಿಸುವ ಒಕ್ಕಲಿಗರ ವಸತಿಸ್ಥಳ. ದೇಶವಿಭಜನೆಗೆ ಮೊದಲು ಅಲ್ಲಿ ಬಲೂಚೀ ಅಪರಾಧಿಕುಲಿಕರು ವಾಸವಾಗಿದ್ದರು. ಅವರಲ್ಲಿ ಅನೇಕ ತರುಣರು ರಾಷ್ಟ್ರೀಯ ಸ್ವಯಂಸೇವಕ ದಲಕ್ಕೆ ಸೇರಿದ್ದನ್ನು ಕಂಡು ನನಗೆ ತೃಪ್ತಿಯಾಯಿತು. ಅದರೆ ಆ ಕಾರಣದಿಂದ ಅವರ ಮೇಲಿರುವ ಪ್ರತಿಬಂಧಕಗಳನ್ನು ಮಾತ್ರ ಅಲ್ಲೀ ವಾಸಿಸಿದ್ದ ಸೂಪರಿಂಟೆಂಡೆಂಟರು ಕಡಿಮೆಮಾಡಿದ್ದಿಲ್ಲ. ರಾಜೌಂದ ಠಾಣ್ಯದ ಕರ್ತವ್ಯದ ಕವಾಯತು ಮಾಡಲು ಅವರು ನಾಲ್ಕು ಮೈಲು ತಿರುಗಬೇಕು. ಈ ರಾಷ್ಟ್ರೀಯಸೇವೆಗೆ ಕೂಡ ಅವರು ಸೂಪರಿಂಟೆಂಡೆಂಟರ ಅಪ್ಪಣೆ ಪಡೆದೇ ವಸತಿಸ್ಥಳವನ್ನು ಬಿಟ್ಟು ಹೊರಡಬೇಕು. ಮತ್ತು ಅವರನ್ನು ರಾಜೌಂದದಿಂದ ಹೊರಗೆ ಕೆಲಸಕ್ಕೆ ಹಚ್ಚಿದರೆ ಯಾವಾಗಲೂ ಮೊದಲು ವಸತಿಸ್ಥಳಕ್ಕೆ ಹೋಗಿ ಸೂಪರಿಂಟೆಂಡೆಂಟರ ಅಪ್ಪಣೆಪಡೆದು ಅನಂತರವೇ ಹೋಗಬೇಕಾದ ಸ್ಥಳಗಳಿಗೆ ಅವರು ಹೋಗಬೇಕು. ಹಾಗೆ ಸೂಪರಿಂಟೆಂಡೆಂಟರ ಅಪ್ಪಣೆ ಪಡೆಯದೆ ಅವರೆಂದೂ ಕರ್ತವ್ಯಕ್ಕಾಗಿಯೂ ಹೊರ ಹೊರಡುವಂತಿಲ್ಲ.

ವಸತಿ ಸ್ಥಳದ ಕೆಲ ಶಿಕ್ಷಿತ ನಿವಾಸಿಗಳು ಅಜಾದ್ ಸುಧಾರ್ ಸಭಾ ಎಂಬ ಸಂಘವೊಂದನ್ನು ರಚಿಸಿಕೊಂಡಿದ್ದಾರೆ. ಅವರ ಅಧಿಕಾರಿಗಳನ್ನು ನಾನಾ ಬಗೆಯಿಂದ ಸೂಪರಿಂಟೆಂಡೆಂಟರು ತೊಂದರೆಗೀಡು ಮಾಡುತ್ತಾರೆ. ಇನ್ನೂ ಎಷ್ಟೋ ದೂರುಗಳು ನನ್ನ ಮುಂದೆ ಬಂದವು, ಅವರ ಶೋಧನೆಯನ್ನು ಕೆಗೆದು ಹಾಕಲು ಅ. ಭಾ. ಹರಿಜನಸೇವಕಸಂಘವು ಕ್ರಮ ತೆಗೆದುಕೊಳ್ಳುತ್ತಿದೆಯೆಂದು ಆ ಪಕ್ಷಭಾಗ್ಯ ಮತ್ತು ಅತ್ಯಂತ ಪಮಿತ ಎನಿಸಿದ ಪಂಗಡದ [illegible] ಜನರಿಗೆ ನಾನು [illegible].

೨೬-೫-೪೯ —[illegible]

## ವೇತನವಿಧಾನ

[illegible] ಸಂಬಂಧಿಸಿದ ಪರಿಶ್ಚೇದಗಳನ್ನು [illegible] ನೆಯಲ್ಲಿ ಆಗಲೇ ಚರ್ಚಿಸಿ [illegible] ಯುತೋ ಏನೋ ನನಗೆ ಗೊತ್ತಿಲ್ಲ. [illegible] ದಂತೆ ಘಟನೆಯಲ್ಲೇ ಇಂತಿಷ್ಟೆಂದು [illegible] ಗನ್ನು ನಿರ್ದಿಷ್ಟಗೊಳಿಸಿರಬಾರದು. [illegible] ಮಾಡುವುದು ತಪ್ಪು ತಪ್ಪೆಂದು [illegible] ತ್ತದೆ. ಅದನ್ನು ಪ್ರತಿವರ್ಷವೂ [illegible] ಮುಂಗಡಪತ್ರಿಕೆಯೊಡನೆ ವಿಶೇಷ [illegible] ಯಿಂದ ಮುಂದೆ ಬದಲಿಸುವವರೆಗೆ ಅಮಲಿನಲ್ಲಿರುವಂತೆ ನಿರ್ದೇಶಿಸಬೇಕೋ" ಹೇಗೆಂಬ [illegible] ವನ್ನು ಎಲ್ಲರೂ ವಿಚಾರ ಮಾಡಲಿ.

ಕರಡಿನಲ್ಲಿ ಕೆಲ ದೊಡ್ಡ ಅಧಿಕಾರಿಗಳಿಗೆ ೪೦೦೦ ದಿಂದ ೫೦೦೦ ರೂಪಾಯಿಗಳ [illegible] ಮೊಬಲಗುಗಳನ್ನು ಸೂಚಿಸಿದ್ದು ಹೆಚ್ಚಾ[illegible] ತೆಂದು ನಾನು ಹೀಗೆ ಹೇಳುತ್ತಿಲ್ಲ. ಆದರೆ ಘಟನೆಯ ಪೂರ್ವಪೀಠಿಕೆಯಲ್ಲಿ ಹೇಳಿದ್ದಕ್ಕೆ ವಿರುದ್ಧವಾಗುತ್ತದೆ ಎಂದು. ಅದೇನೆಂದರೆ, ಪೀಠಿಕೆಯಲ್ಲಿ— ಎಲ್ಲ ನಾಗರಿಕರಿಗೂ ಇತರ ವಿಷಯಗಳೊಂದಿಗೆ "ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ಸ್ಥಾನಸಾಮ್ಯ ಮತ್ತು ಅವಕಾಶಸಾಮ್ಯ" ಗಳನ್ನು ಒದಗಿಸಲಾಗುತ್ತದೆ ಎಂದು. ಕರಡುಗಾರರು ಬಹಳ ಬುದ್ಧಿವಂತಿಕೆಯಿಂದ ಎಲ್ಲರಿಗೂ ಆರ್ಥಿಕ ಲಾಭದಲ್ಲಿ ಸಾಮ್ಯವಿರಬೇಕೆಂಬ ವಚನವಿತ್ತಿಲ್ಲ. ಆರ್ಥಿಕ ವಿಷಮತೆ ನಾಗರಿಕರಲ್ಲಿದ್ದರೂ ಅದು ನ್ಯಾಯವಾಗಿರಬೇಕಲ್ಲದೆ, ಸ್ಥಾನಾವಕಾಶಗಳ ಸಾಮ್ಯವನ್ನು ಸಂಪಾದಿಸುವುದೇ ಅಸಾಧ್ಯವೆನಿಸುವಷ್ಟು ದೊಡ್ಡದಿರಬಾರದು. ಅದನ್ನೇ ಬೇರೆಯ ರೀತಿಯಿಂದ ಹೇಳುವುದಾದರೆ, ನಾಡಿನ ನಾಗರಿಕರ ಆದಾಯಗಳಲ್ಲಿಯ ಪರಮಾವಧಿ ಮತ್ತು ಕನಿಷ್ಠಾವಧಿಗಳ ವ್ಯತ್ಯಾಸ ನ್ಯಾಯವಾದ ಮಿತಿಗಳೊಳಗಿರಬೇಕು; ಉದಾಹರಣೆಗಾಗಿ ಒಂದು ಅತಿ ಸೌಮ್ಯ ಸಾಮ್ಯವಾದೀ ಪ್ರಮಾಣವಾದ ೧೦ ಅಥವಾ ೧೨ ಕ್ಕೆ ೧ ಎಂಬುದನ್ನು ತೆಗೆದುಕೊಳ್ಳೋಣ. ಏಕೆಂದರೆ ಇದಕ್ಕಿಂತ ಹೆಚ್ಚಿನ ವ್ಯತ್ಯಾಸವಿದ್ದರೆ ನಾಗರಿಕನಿಗೆ ಸಮಾನ ಸ್ಥಾನಾವಕಾಶಗಳನ್ನು ಪಡೆಯುವುದು ಅಶಕ್ಯವಾಗುವುದು.

ಸುಪ್ರೀಂ ಕೋರ್ಟಿನ ಮುಖ್ಯನ್ಯಾಯಾಧೀಶ ಅಥವಾ ದೇಶದ ಅಧ್ಯಕ್ಷ ಇವರ ಸಂಬಳ ತಿಂಗಳಿಗೆ ೫೦೦೦ ರೂ. ಗಳಾದರೆ ಆಗ ಭಾರತ ತನ್ನ ಅತಿ ಬಡ ನಾಗರಿಕನಿಗೆ ತಿಂಗಳಿಗೆ ೪೦೦ ರೂಪಾಯಿಗಳ ಆದಾಯವನ್ನು ಒದಗಿಸಿಕೊಡುವ ಸ್ಥಿತಿಗೆ ಬಂದಿರಬೇಕಾಯಿತು. ಆಗ ಮಾತ್ರ ವಚನದ ತತ್ವವನ್ನು ಸ್ವಲ್ಪಮಟ್ಟಿಗಾದರೂ ಪಾಲಿಸಿದಂತಾದೀತು. [illegible] ತಿಂಗಳಿಗೆ ೪೦೦ ರೂಪಾಯಿಗಳ ಆದಾಯವಿರುವ ಒಂದು ವ್ಯಕ್ತಿಗೆ ತಿಂಗಳಿಗೆ [illegible] ರೂಪಾಯಿಗಳನ್ನು ಸಂಪಾದಿಸುವ ವ್ಯಕ್ತಿಯ ಸ್ಥಾನ ಮತ್ತು ಅವಕಾಶಗಳು ಲಭ್ಯವಾಗುವುದು ದುರ್ನಿರೀಕ್ಷ್ಯವೇ ಸರಿ. ಆದರೆ ಸರಿಯಾದ ಮಾರ್ಗದಲ್ಲಿ ಪುರೋಗತಿಯಾಗುತ್ತಿದೆ ಎಂದಾದರೂ ನಾವು ಸಮಾಧಾನಪಟ್ಟುಕೊಳ್ಳಬಹುದು. ಮುಖ್ಯನ್ಯಾಯಾಧೀಶ ಅಥವಾ ಅಧ್ಯಕ್ಷ ಮತ್ತು ಅವರ ಸಹಾಯಕ ಅಧಿಕಾರಿಗಳೆಂಬ ಸಂಕುಚಿತ ಮಿತಿಯೊಳಗೇ ಈ ತತ್ವವನ್ನು ಅನ್ವಯಿಸಿದರೂ ಸರಕಾರದ ಅತಿ ಕಡಿಮೆ ಸಂಬಳದ ಕಸಗುಡಿಸುವ ಚೋಪದಾರ ಅಥವಾ ಆಳಿಗೆ ತಿಂಗಳಿಗೆ ೪೦೦ ಅಥವಾ ೫೦೦ ರೂಪಾಯಿಗಳನ್ನು ಕೊಡಬೇಕಾದೀತು. ಅದು ಸಾಧ್ಯವೆ? ಸಾಧ್ಯವಿಲ್ಲವಾದರೆ ಪ್ರಜಾರಾಜ್ಯವು ತನ್ನ [illegible]ನೆಯ ಮೂಲಕ ಅಂಥ ವೇತನಗಳನ್ನು ಕೊಡುವುದಾಗಿ ಜನರಿಗೆ ವಚನ ಕೊಡಬಲ್ಲುದೇ?

(ಮುಂದುವರಿಯುವುದು)

— ಕಿ. ಘ. ಮ.

❋ ಪಶ್ಚಿಮ ಬಂಗಾಲದ ಮುಖ್ಯ ಶ್ರೀ ಸುರೇಂದ್ರ ಮೋಹನ ಘೋಷ ಹಾಗು ಪ್ರಮುಖ ಕಾಂಗ್ರೆಸಿಗರಾದ ಡಾ. ಪ್ರತಾಪ ಚಂದ್ರ ಗುಹರ ಮನೆಯ ಮೇಲೆ ಕಮ್ಯುನಿಸ್ಟರ ದಾಳಿಯಾದ ನಂತರ ಕಲಕತ್ತೆಯಲ್ಲಿ ಮುತ್ತಿ ೧೫ ದಿನಗಳ ವರೆಗೆ ಪುನಃ ೧೪೪ ನೆ ಕಲಮು ಜಾರಿಯಾಗಿದೆ.

## ಮಕ್ಕಳಿಗಾಗಿ

# ನನ್ನ ಚಿಕ್ಕಪ್ಪ

ಅಂದು ಸಂಜೆ ನಾನೂ ನಾರಾಯಣನೂ ಪಾರ್ಕಿನಲ್ಲಿ ರೇಡಿಯೋ ಕೇಳುತ್ತಾ ಕುಳಿತಿದ್ದೆವು. ಪಾರ್ಕು ಮುದುಕರಿಂದಲೂ ಯುವಕ ಯುವತಿಯರಿಂದಲೂ ಆಟವಾಡಿ ನಕ್ಕು ನಲಿಯುತ್ತಿದ್ದ ಹುಡುಗರಿಂದಲೂ ಕಡಲೆಕಾಯಿ ಮಾರುವವರಿಂದಲೂ ನಿಬಿಡವಾಗಿತ್ತು. ನಾನೂ ನನ್ನ ಸ್ನೇಹಿತನೂ ಕಡಲೆಕಾಯಿ ತಿನ್ನುತ್ತಾ ಒಂದು ಕಲ್ಲು ಬೆಂಚಿನ ಮೇಲೆ ಕುಳಿತಿದ್ದೆವು. ಇದೇ ಸಮಯದಲ್ಲಿ ಒಬ್ಬ ಮುದುಕ "ಸ್ವಾಮಿ ಕಾಸು ಏನಾದರು ಕೊಡಿ. ಮೂರುದಿನದಿಂದಲೂ ಹೊಟ್ಟೆಗಿಲ್ಲ" ಎಂದು ಬೇಡಿಕೊಂಡನು. ಆ ಮುದುಕನನ್ನು ನೋಡುತ್ತಲೇ ನಾರಾಯಣನ ಕಣ್ಣು ನೀರಿನಿಂದ ತುಂಬಿದವು. ಆತನ ಮನಸ್ಸಿನಲ್ಲಿ ದಯೆಯು ಅಂಕುರಿಸಿತು. ತೊಟ್ಟ ಕೋಟಿನಲ್ಲಿ ಕೈಹಾಕಿ ಒಂದು ರೂಪಾಯಿಯನ್ನು ಆ ಮುದುಕನ ಕೈಗಿತ್ತನು. ನಾರಾಯಣ ಎಂದು ಎಷ್ಟು ಕೇಳಿಕೊಂಡರೂ ಒಂದು ಲೋಟ ಕಾಫಿಯನ್ನು ಕೊಡಿಸದವನು ಇಂದು ಆ ಮುದಕನಿಗೆ ಒಂದು ರೂಪಾಯಿಯನ್ನು ಕೊಟ್ಟದ್ದು ನೋಡಿ ನನಗೆ ಆಶ್ಚರ್ಯವಾಯಿತು. ನಾನು ಆಶ್ಚರ್ಯಪಟ್ಟಿದ್ದನ್ನು ನೋಡಿ ಅವನು "ಆ ಮುದುಕನನ್ನು ನೋಡಿ ಯಾವುದೋ ಒಂದು ಹಳೆಯ ಕಥೆಯು ಜ್ಞಾಪಕಕ್ಕೆ ಬರುತ್ತದೆ. ಇದೋ ಆ ಕಥೆ" ಎಂದು ಹೇಳಿದ.

"ನಮ್ಮ ತಂದೆಯವರು ಆದಾಯಕರದ ಆಫೀಸಿನಲ್ಲಿ ಗುಮಾಸ್ತರಾಗಿದ್ದರು. ಅವರಿಗೆ ಬರುತ್ತಿದ್ದ ಸಂಬಳವು ಎಲ್ಲಿಗೂ ಸಾಲದು. ಅವರಿಗೆ ಆ ಕೆಲಸವನ್ನು ಬಿಟ್ಟರೆ ಬೇರೆ ಯಾವುದೂ ಸಿಗುವಂತಿರಲಿಲ್ಲ. ಕೆಲಸವೂ ಬಹಳ, ಆದಾಯ ಕಡಿಮೆ. ಅವರು ಮನೆಯನ್ನು ಏಳು ಗಂಟೆಗೆ ಬಿಟ್ಟರೆ ಪುನಃ ಸಂಜೆ ಆರು ಗಂಟೆಗೆ ಬರುತ್ತಿದ್ದರು. ನನಗೆ ಇಬ್ಬರು ತಂಗಿಯರು. ಅವರಿಗೆ ಮದುವೆಯಾಗಬೇಕಾಗಿತ್ತು. ನನ್ನ ವಿದ್ಯಾಭ್ಯಾಸಕ್ಕೆ ಹಣವನ್ನು ಕಳುಹಿಸಬೇಕಾಗಿತ್ತು. ನಮ್ಮ ತಾಯಿಯವರು ಸಂಸಾರವನ್ನು ಬಲು ಜಾಣ್ಮೆಯಿಂದ ನಿರ್ವಹಿಸುತ್ತಿದ್ದರು. ನಾವು ಮಿತವ್ಯಯದಿಂದ ಜೀವನ ನಡೆಸುತ್ತಿದ್ದೆವು. ಆಗಾಗ ಬೇರೆಯವರ ಮನೆಗಳಿಗೂ ಊಟಕ್ಕೆ ಹೋಗುತ್ತಿದ್ದುದುಂಟು.

ಮನೆಗೆ ಬೇಕಾದ ಪ್ರತಿಯೊಂದು ವಸ್ತುವನ್ನು ಕಡಿಮೆ ದರಗಳಿಗೆ ಕೊಳ್ಳುತ್ತಿದ್ದೆವು. ನಮ್ಮ ಬಟ್ಟೆಗಳನ್ನು ನಾವೇ ಹೊಲಿದುಕೊಳ್ಳಬೇಕಾಗಿತ್ತು. ನಮ್ಮ ಊಟವು ಹೆಚ್ಚು ಖರ್ಚಿಲ್ಲದ್ದಾಗಿತ್ತು. ಎಷ್ಟೋ ವೇಳೆ ನಾನು ಹರಿದ ಪಂಜೆಯಲ್ಲಿ ಗುಂಡಿಗಳಿಲ್ಲದ ಷರಟಿನಲ್ಲಿ ಕಾಲೇಜಿಗೆ ಹೋಗಿ ಸ್ನೇಹಿತರ ಅಪಹಾಸ್ಯಕ್ಕೆ ಗುರಿಯಾಗಬೇಕಾಗಿತ್ತು.

ನಮ್ಮ ತಂದೆಯವರು ವರಗಳಿಗಾಗಿ ಊರೂರು ಅಲೆದು ಸಾಕಾದರು. ನೆರೆಹೊರೆಯವರ ಟೀಕೆಗಳನ್ನು ಸಹಿಸುವುದಂತೂ ಅಸಾಧ್ಯವಾಯಿತು. ನಮ್ಮ ತಾಯಿಯವರು ಈ ವ್ಯಥೆಯಿಂದ ಸಾಯುವ ಸ್ಥಿತಿಗೆ ಬಂದಿದ್ದರು. ಹೆಣ್ಣನ್ನು ನೋಡಲು ಬಂದ ನಾಲ್ಕು ವರಗಳಲ್ಲಿ ಒಬ್ಬನಿಗೆ ವರದಕ್ಷಿಣೆ ನಾಲ್ಕು ಸಾವಿರ ಬೇಕು, ಇನ್ನೊಬ್ಬನಿಗೆ ಹೆಣ್ಣು ಕಪ್ಪು, ಮೂರನೆಯವನಿಗೆ ಹೆಣ್ಣು ಅವಿದ್ಯಾವಂತಳು. ಕೊನೆಯವನಿಗೆ ಹೆಣ್ಣಿಗೆ ವೆಳ್ಳಗಣ್ಣು. ಹೀಗಾಗಿ ನಮ್ಮ ತಂದೆಯವರು ವರಗಳನ್ನು ಹುಡುಕುವುದನ್ನು ನಿಲ್ಲಿಸಿದರು.

ಪ್ರತಿದಿನವೂ ನಮ್ಮ ತಂದೆಯವರು ಮುಂಬೈ ರೈಲು ಬಂದಿತೆಂದರೆ ಈ ಪದಗಳನ್ನು ಉಚ್ಚರಿಸದೇ ಇರುತ್ತಿರಲಿಲ್ಲ. "ಎಂತಹ ಭಾಗ್ಯ, ಈ ರೈಲುಗಳಲ್ಲಿ ಪ್ರಕಾಶನು ಬಂದರೆ!" ಎನ್ನುತ್ತಿದ್ದರು. ನನ್ನ ಚಿಕ್ಕಪ್ಪ ಪ್ರಕಾಶ್, ನಮ್ಮ ತಂದೆಯವರ ತಮ್ಮ, ಇವರೇ ನಮ್ಮ ಸಂಸಾರಕ್ಕೆ ಆಶಾದೀಪವಾಗಿದ್ದರು. ನಾನು ಅವರ ವಿಷಯವಾಗಿ ಕೇಳಿದ್ದೆನೇ ಹೊರತು ನೋಡಿರಲಿಲ್ಲ. ನಾನು ಅವರನ್ನು ಹುಡುಕಬೇಕೆಂದು ಇಚ್ಛೆಪಟ್ಟಿದ್ದೆ. ಆದರೆ ವಿಳಾಸವು ದೊರೆಯುವುದು ಕಷ್ಟವಾಗಿತ್ತು. ಅವರು ಮುಂಬೈಗೆ ತೆರಳುವುದಕ್ಕಿಂತ ಮುಂಚಿನ ಅವರ ಜೀವನದ ಪ್ರತಿಯೊಂದು ವಿಷಯವನ್ನು ನಮ್ಮ ತಂದೆಯವರಿಂದ ತಿಳಿದೆ.

ಅವರು ನಮ್ಮ ಊರಿನಲ್ಲಿದ್ದಾಗ ಅನೇಕ ದುಸ್ವಾರ್ಯಗಳಿಗೆ ಮನಸೋತರು. ಮೂರು ಹೊತ್ತೂ ವೇಶ್ಯಾಗೃಹ, ಕ್ಲಬ್ಬುಗಳಲ್ಲಿ ಕಾಲ ಕಳೆಯುವುದು, ಜೂಜು, ಕುದುರೆಪಂದ್ಯಗಳಲ್ಲಿ ಭಾಗವಹಿಸುವುದು. ಇದರಿಂದ ಮನೆಯಲ್ಲಿಯ ಒಡವೆಗಳೆಲ್ಲವೂ ಸಾಲಗಾರರ ಕೈ ಸೇರಿದವು. ಜೊತೆಗೆ ಬೇಕಾದಷ್ಟು ಸಾಲವೂ ತಲೆಯಮೇಲೆ ಏರಿತು. ಇನ್ನು ಅವರಿಗೆ ಕಳ್ಳತನವೊಂದು ಬಾಕಿ ಇದ್ದಿತು. ಅದನ್ನು ಮಾಡಲಾರದೆ ಮುಂಬೈಗೆ ಓಡಿಹೋದರು.

ಒಂದು ದಿನ ಅಂಚೆಯವನು ಒಂದು ಪತ್ರವನ್ನು ತಂದುಕೊಟ್ಟನು. ಅದು ನಮ್ಮ ಚಿಕ್ಕಪ್ಪನವರದೇ ಆಗಿತ್ತು. ಮುಂಬೈಯಲ್ಲಿ ತಾವು ವ್ಯಾಪಾರ ಮಾಡುತ್ತಿರುವುದಾಗಿಯೂ ವಿಶೇಷ ಲಾಭ ಬರುವುದರಲ್ಲಿ ಸಂಶಯವಿಲ್ಲವೆಂತಲೂ ಬರುವ ವರ್ಷ ಊರಿಗೆ ಬಂದು ಸಾಲಗಳನ್ನು ತೀರಿಸಿ ನಮ್ಮ ತಂದೆಯವರಿಗೆ ಧನಸಹಾಯ ಮಾಡುವುದಾಗಿಯೂ ಭರವಸೆ ಕೊಟ್ಟು ಕಾಗದವನ್ನು ಬರೆದಿದ್ದರು. ಈ ಕಾಗದವನ್ನು ನೋಡಿ ನಮ್ಮ ತಂದೆಯವರು ಗಾಳಿಯಲ್ಲಿ ಗೋಪುರಗಳನ್ನು ಕಟ್ಟಲಾರಂಭಿಸಿದರು, ಆ ಕಾಗದವು ಅವರಿಗೊಂದು ದೇವವಾಕ್ಯವಾಯಿತು. ಅಂದು ಮನೆಯಲ್ಲಿ ಎಲ್ಲರಿಗೂ ಆದ ಆನಂದವಂತೂ ಹೇಳತೀರದು. ನಮ್ಮ ತಂದೆಯವರು ಆ ಕಾಗದವನ್ನು ಎಲ್ಲರಿಗೂ ತೋರಿಸುವವರೆ!

ಆದರೆ ಇದಾದ ಮೇಲೆ ಹತ್ತುವರ್ಷದವರೆಗೂ ನಮ್ಮ ಚಿಕ್ಕಪ್ಪನವರಿಂದ ಯಾವ ರೀತಿಯಾದ ಉತ್ತರವೂ ಬರಲಿಲ್ಲ. ಆದರೂ ನಮ್ಮ ತಂದೆಯವರ ಗಾಳಿಗೋಪುರಗಳು ದಿನೇದಿನೇ ಬೆಳೆಯುತ್ತಾಹೋದವು. ನಮ್ಮ ತಾಯಿಯವರಂತೂ "ಪ್ರಕಾಶ ಇಲ್ಲಿಗೆ ಬಂದು ಬಿಟ್ಟರೆ ನಮ್ಮ ಕಷ್ಟಗಳೆಲ್ಲಾ ಪರಿಹಾರವಾಗಿ ರಾಜರಂತೆ ಮೆರೆಯಬಹುದು" ಎನ್ನುತ್ತಿದ್ದರು. ನಮ್ಮ ತಂದೆಯವರು ಮುಂಬೈಯಿಂದ ಬರುವ ರೈಲಿಗೆ ಇದಿರುನೋಡಿ ಮುದುಕರಾಗುತ್ತಾ ಬಂದಿದ್ದರು. ನಮ್ಮ ಚಿಕ್ಕಪ್ಪನವರ ಬರುವಿಕೆಯನ್ನು ಇದಿರು ನೋಡುತ್ತಾ ಸಾವಿರ ಕೆಲಸಗಳನ್ನು ಮುಂದಿಟ್ಟುಕೊಂಡಿದ್ದರು. ಈ ವೇಳೆಗಾಗಲೇ ತಂಗಿಯರಲ್ಲಿ ಒಬ್ಬಳಿಗೆ ಹದಿನೆಂಟು, ಇನ್ನೊಬ್ಬಳಿಗೆ ಇಪ್ಪತ್ತು ಮುಗಿದಿದ್ದವು.

ಕೊನೆಗೊಂದು ದಿನ ನನ್ನ ಚಿಕ್ಕ ತಂಗಿಗೆ ಮದುವೆಯಾಗುವ ಸುಯೋಗವು ಲಭಿಸಿತು. ನನ್ನ ತಂಗಿಯನ್ನು ಮದುವೆಯಾಗಲು ಬಂದವರು ಸುಂದರರಾಗಿದ್ದರೂ ಅಷ್ಟೇನೂ ವಿದ್ಯಾವಂತರಾಗಿರಲಿಲ್ಲ. ಅವರು ಒಬ್ಬ ಗುಮಾಸ್ತರಾಗಿದ್ದರು. ಹಣವಂತರಲ್ಲ; ಆದರೆ ಗೌರವಸ್ಥರು; ನಮ್ಮ ತಂದೆಯವರು ನಮ್ಮ ಚಿಕ್ಕಪ್ಪನವರು ಬರೆದಿದ್ದ ಕಾಗದವನ್ನು ತೋರಿಸಿ ಹಾಗೂ ಹೀಗೂ ಮದುವೆಗೆ ಒಪ್ಪಿಸಿದರು. ಮದುವೆಯು ನಿರ್ವಿಘ್ನವಾಗಿ ನೆರವೇರಿತು. ಮದುವೆಯು ಮುಗಿದ ಮೇಲೆ ನಾವೆಲ್ಲರು ನಮ್ಮ ಭಾವನವರ ಊರಿಗೆ ಹೋಗಬೇಕೆಂದು ಗೊತ್ತಾಯಿತು.

"ನಂದಿ" ನಮ್ಮ ಭಾವನವರ ಊರು. ನೋಡಬೇಕಾದ ಸ್ಥಳವೇ. ಊರಿನಲ್ಲಿ ಪುರಾತನ ಶಿಲ್ಪಚಾತುರ್ಯದ ಸ್ಮಾರಕವೋ ಎಂಬಂತೆ "ನರಸಿಂಹ ಸ್ವಾಮಿ" ದೇಗುಲವಿದೆ. ಇದರಲ್ಲಿ ತಮಿಳು, ಮತ್ತು ಪಾಲಿಭಾಷೆಯ ಶಾಸನಗಳು ಅಲ್ಲಲ್ಲಿ ಗೋಡೆಗಳ ಮೇಲಿವೆ. ಇದು ಒಂದು ಬಿಸಿಲುಗಾಲದ ಯಾತ್ರಾಸ್ಥಳ. ಊರಿಗೆ ಸಮೀಪದಲ್ಲೇ ಒಂದು ಬೆಟ್ಟವಿದೆ. (೫೦೦೦ ಅಡಿ ಎತ್ತರ) ಈ ಬೆಟ್ಟದ ಮೇಲೆ ಮೈಸೂರು ಜೂಆಲಾಜಿಕಲ್ ಇಲಾಖೆಯವರು ತೋಟಗಳನ್ನುಮಾಡಿಸಿದ್ದಾರೆ. ಬೆಟ್ಟದ ಮೇಲೆ ಐದು ಬಂಗಲೆಗಳಿವೆ. ಬೆಟ್ಟದ ಮೇಲೆ ಹತ್ತಲು ರಸ್ತೆಯು ಮತ್ತು ಮೆಟ್ಟಲುಗಳು ಇವೆ. ವಿದ್ಯುದ್ದೀಪಗಳು ಬೆಟ್ಟದ ಮೇಲಿವೆ. ಬಂಗಲೆಗಳ ಪಕ್ಕದಲ್ಲಿ ಆಟದ ಬೈಲುಗಳು ಇವೆ. ಊಟ ಉಪಚಾರಗಳಿಗೆ ಹೋಟೆಲೊಂದಿದೆ. ರೋಗರುಜಿಗಳಿಗೆ ಔಷಧಾಲಯವು ಇದೆ: ಇದನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯು ಯಾವಾಗಲೂ ಬೆಟ್ಟದ ಮೇಲೆಯೇ ಇರುವನು. ಬಿಸಿಲುಗಾಲಕ್ಕೆ ಬಹಳ ಸೊಗಸಾದ ಸ್ಥಳ. ಇಲ್ಲಿ ಟೀಪುಸುಲ್ತಾನನ ಕೋಟೆಯಿದೆ. ಟೀಪು ತನ್ನ ಶತ್ರುಗಳಿಗೆ ಮರಣ ದಂಡನೆಯನ್ನು ವಿಧಿಸುತ್ತಿದ್ದ ಸ್ಥಳವು "ಟೀಪ್ಪುಸ್‌ಫಾಲ್" (Tippusfall) ಎಂಬ ಹೆಸರಿನಿಂದ ಮೆರೆಯುತ್ತಿದೆ.

ಕೊನೆಗೆ ನಂದಿಗಾಗಿ ಪ್ರಯಾಣ ಬೆಳಸಿದೆವು. ರೈಲ್ವೆ ನಿಲ್ದಾಣವನ್ನು ಬಂದು ಸೇರಿದೆವು. ರೈಲು ಬರುವುದಕ್ಕೆ ಇನ್ನೂ ಹೊತ್ತಿದ್ದರೂ ಪ್ರಯಾಣಿಕರ ಗದ್ದಲವು ವಿಶೇಷವಾಗಿತ್ತು. ನಾನೇ ಹೋಗಿ ಗದ್ದಲದಲ್ಲಿ ನಿಂತು ಟಿಕೆಟ್ಟು ತಂದೆ. ಅಷ್ಟು ಹೊತ್ತಿಗೆ ರೈಲು ಬಂದಿತು. ನಾವೆಲ್ಲರು ಬೇಗನೆ ಗಾಡಿಯಲ್ಲಿಹತ್ತಿಕುಳಿತೆವು. ಗಾಡಿಯಲ್ಲಿವಿಪರೀತ ಸೆಕೆಯಾಗುತಿದ್ದುದರಿಂದ ನಮ್ಮ ತಂದೆಯವರು ಷರಟಿನ ಗುಂಡಿಗಳನ್ನು ಸಡಿಲಮಾಡಿ ಗಾಳಿಗೆ ಮೈಯೊಡ್ಡಿದ್ದರು. ನಮ್ಮ ನೆರೆಯಲ್ಲಿ ಕುಳಿತಿದ್ದ ಸ್ತ್ರೀಯರು ತಾಳೆ ನುಂಗನ್ನು (ತಾಳೆಯ ಸೀಯಾಳವನ್ನು) ಮಾರಲು ಬಂದ ಒಬ್ಬ ಮುದುಕನಲ್ಲಿ ವ್ಯಾಪಾರ ನಡೆಸುತ್ತಿದ್ದರು. ಅವರು ನುಂಗು ಕೊಂಡಿದ್ದನ್ನು ನೋಡಿದ ನನ್ನ ತಂಗಿಯರು ಕೊಳ್ಳಲು ಇಷ್ಟಪಟ್ಟರು. ನನ್ನ ತಾಯಿಯವರಿಗೆ ಹಣವನ್ನು ದುರ್ವ್ಯಯ ಮಾಡಲು ಇಷ್ಟವಿರಲಿಲ್ಲ. ಇದನ್ನು ಕಂಡು ನಾನು "ನನಗೆ ಬೇಡವೆಂದೆ." ನಮ್ಮ ತಂದೆಯವರು ತಮ್ಮ ಅಳಿಯನಿಗೂ ಮಗಳಿಗೂ ತೆಗೆದುಕೊಟ್ಟು ಅದರಲ್ಲಿರುವ ನೀರನ್ನು ಚೆಲ್ಲದೆ ಹೇಗೆ ತಿನ್ನಬೇಕೆಂಬುದನ್ನು ಹೇಳಿಕೊಡುತ್ತಿದ್ದರು. ಅಷ್ಟರಲ್ಲಿಯೆ ಆ ಮುದಕನನ್ನು ನೋಡಿ ನಮ್ಮ ತಂದೆಯವರು ನಮ್ಮ ತಾಯಿಯವರ ಕಿವಿಯಲ್ಲೇನೋ ಹೇಳಿದರು. ಅವರ ಮುಖ ಬಿಳಿಚಿಕೊಂಡಿತು. ನಮ್ಮ ತಾಯಿಯವರು ಆಶ್ಚರ್ಯದಿಂದ "ಏನು ಪ್ರಕಾಶನೇ?" ಎಂದು ಕೇಳಿದರು.

"ಏಕೆ, ನನ್ನ ತಮ್ಮನೇಕಾಗಿರಬಾರದು. ಅವನು ಮುಂಬೈಯಲ್ಲಿ ಸೌಖ್ಯವಾಗಿಲ್ಲವೆಂದು ತಿಳಿದಿದ್ದರೆ, ನಾನು ಅವನೇ ಎಂದು ತಿಳಿಯುತ್ತಿದ್ದೆ."

ನಮ್ಮ ತಾಯಿಯವರು ನಡುಗಿದರು.

"ನಿಮಗೆ ಹುಚ್ಚು! ನಿಮಗೆ ಅವನಲ್ಲವೆಂದೂ ತಿಳಿದು ಇಂತಹ ವಿವೇಚನೆಯಿಲ್ಲದ ಮಾತುಗಳನ್ನೇಕಾಡುತ್ತೀರಿ?"

ನಮ್ಮ ತಂದೆಯವರು "ನೀನೆ ಸ್ವತಃ ಹೋಗಿ ನೋಡು, ನೀನೇ ನಿನ್ನ ಕಣ್ಣುಗಳಿಂದ ಕಂಡರೆ ತಿಳಿಯುವುದು" ಎಂದರು.

ನಮ್ಮ ತಾಯಿಯವರು ಆ ಮುದಕನಿದ್ದ ಸ್ಥಳಕ್ಕೆ ಹೋದರು. ನಾನು ಆ ಮುದುಕನನ್ನು ನೋಡುತ್ತಿದ್ದೆ. ಅವನ ದೇಹವು ಬಡವಾಗಿತ್ತು. ಮುಖದ ಮೇಲೆ ಮುದಿತನದ ಗೆರೆಗಳು ಕಾಣಸುತ್ತಿದ್ದವು. ಕೂದಲಾಗಲೇ ಬೆಳ್ಳಗಾಗಿತ್ತು. ಕಣ್ಣುಗಳು ಮಂಜಾಗಿದ್ದವು- ಅವನು ನಮ್ಮ ಕಡೆಗೊಂದುಸಲವೂ ನೋಡಲಿಲ್ಲ. ಅವನ ಕೆಲಸದಲ್ಲೇ ಮಗ್ನನಾಗಿದ್ದನು.

ನಮ್ಮ ತಾಯಿಯವರು ಹಿಂದಿರುಗಿದರು. ಅವರ ಮುಖದ ಮೇಲಿದ್ದ ಬೆವರಿನ ಹನಿಗಳನ್ನು ನಾನು ಗಮನಿಸದೆ ಇರಲಿಲ್ಲ. ಅವರು ನಮ್ಮ ತಂದೆಯವರೊಡನೆ ಆಶ್ಚರ್ಯದಿಂದ "ನಾನು ಪ್ರಕಾಶನೆಂದು ನಂಬುತ್ತೇನೆ. ನೀವು ಸ್ಟೇಷನ್ ಮಾಸ್ಟರನ್ನು ಏಕೆ ವಿಚಾರಿಸಬಾರದು" ಎಂದಳು.

"ನಮ್ಮ ತಂದೆಯವರು ಸ್ಟೇಷನ್ ಮಾಸ್ಟರರ ಆಫೀಸಿಗೆ ಹೋದರು. ನಾನು ಅವರನ್ನು ಹಿಂಬಾಲಿಸಿದೆ."

ನಮ್ಮ ತಂದೆಯವರು ಸ್ಟೇಷನ್‌ಮಾಸ್ಟರರ ಹತ್ತಿರ ಮಾತಿಗೆ ಪ್ರಾರಂಭಿಸಿ ಕೊನೆಗೆ" ಆ ಮುದಕನ ವಿಷಯವಾಗಿ ನಿಮಗೇನಾದರೂ ತಿಳಿದಿದೆಯೇ?" ಎಂದು ಕೇಳಿದರು.

ಸ್ಟೇಷನ್‌ಮಾಸ್ತರರಿಂದ ವಿಷಯವೆಲ್ಲ ತಿಳಿಯಿತು. ಅವನ ಹೆಸರು ಪ್ರಸಾದ್ ಅಥವಾ ಪ್ರಕಾಶ್ ಎಂದೂ ಮುಂಬೈಯಲ್ಲಿ ವ್ಯಾಪಾರ ಮಾಡುತ್ತಿದ್ದು ನಷ್ಟಬಂದು ಈ ವೃತ್ತಿಯನ್ನು ಅವಲಂಬಿಸಿರುವನೆಂದೂ ತಿಳಿಸಿದರು. ನಮ್ಮ ತಂದೆಯವರು ಸ್ಟೇಷನ್‌ಮಾಸ್ತರರಿಗೆ ವಂದನೆಗಳನ್ನು ಅರ್ಪಿಸಿ ರೈಲಿನಲ್ಲಿ ಬಂದು ಕುಳಿತರು. ಅವರ ಮುಖವು ವಿವರ್ಣವಾಯಿತು. ಮಂಕು ಹಿಡಿದಂತವರಾಗಿ ಅವನೆ! ಅವನೆ! ಎಂದು ಕೂಗಿಕೊಂಡರು. ನಮ್ಮ ತಾಯಿಯವರು ನಮ್ಮ ತಂದೆಯವರಿಗೆ ಕೂಗಕೂಡದೆಂದರು. ಇಲ್ಲದೆ ಹೋದರೆ ನಮ್ಮ ಅಳಿಯನಿಗೆ ವಿಷಯವು ಗೊತ್ತಾಗುವದೆಂದು ತಿಳಿಸಿ, ನನಗೆ ಒಂದು ರೂಪಾಯಿಕೊಟ್ಟು ಅವನಿಗೆ ಕೊಟ್ಟು ಮಿಕ್ಕ ಹಣವನ್ನು ತರುವಂತೆ ಹೇಳಿದರು. ನಾನು ಅವನಿಗೆ ಒಂದು ರೂಪಾಯಿಕೊಟ್ಟೆ ಚಿಲ್ಲರೆಯನ್ನು ಕೇಳಲಿಲ್ಲ. ಅವನು ಸಂತೋಷಪಟ್ಟು "ದೇವರು ನಿಮಗೆ ಒಳ್ಳೆಯದು ಮಾಡಲಿ" ಎಂದು ಹರಸಿ ಹೊರಟು ಹೋದನು ನಾನು ಮತ್ತೆ ಅವನನ್ನು ನೋಡಿದೆ, ಅವನ ಬಡವಾಗಿದ್ದ ದೇಹವು ಮುದಿತನದಿಂದ ಕುಸಿದಿತ್ತು. ಮನಸ್ಸು "ಅವನೇ ನಿನ್ನ ಚಿಕ್ಕಪ್ಪ, ಪ್ರಕಾಶ" ಎಂದು ಬಾರಿಬಾರಿಗೂ ಹೇಳುತ್ತಿತ್ತು.

ಇಷ್ಟುಹೊತ್ತಿಗೆ ರೈಲು ನಿಲ್ದಾಣವನ್ನು ಬಿಟ್ಟು ಹೊರಟಿತು. ಇನ್ನೊಂದು ಸಲ ನಮ್ಮ ಚಿಕ್ಕಪ್ಪನನ್ನು ನೋಡುವ ಆಸೆಯುಂಟಾಯಿತು. ಆದರೆ ಆತನೆಲ್ಲಿಯೋ ಕಣ್ಣಿಗೆ ಕಾಣದಾಗಿದ್ದ" ಎಂದು ಮುಗಿಸಿದ.

ಆಗಲೇ ಕತ್ತಲೆ ತನ್ನ ಸೆರೆಯನ್ನು ಪ್ರಕೃತಿಯ ಮೇಲೆ ಬೀಸಿತ್ತು. ಪಕ್ಷಿಗಳು ಗೂಡುಗಳಲ್ಲಿ ಸೇರಿದ್ದವು. ಆಗಸದಲ್ಲಿ ತಾರೆಗಳ ಜೊತೆಯಲ್ಲಿ ಚಂದ್ರಮ ಮೇಘಗಳ ಮೇಲೆ ಉಯ್ಯಾಲೆಯಾಡುತ್ತಿದ್ದನು. ಎಂಟುಗಂಟೆ ಬಡಿಯಿತು. ಇಬ್ಬರೂ ಮನೆಗಳಿಗೆ ತೆರಳಿದೆವು.

—ಎಸ್. ಪದ್ಮ.

---

(೬ನೆಯ ಪುಟದಿಂದ)

ಗಳಿಗಿಂತ ಗುಣ ಹೆಚ್ಚಿರುವುದನ್ನು ಸ್ವೀಕರಿಸುವದೊಂದೇ ಮನುಷ್ಯರಿಗೆ ಸಾಧ್ಯವಲ್ಲದ್ದೆ- ಸರ್ವಕಾಲಕ್ಕೆ ಸರ್ವದೇಶಕ್ಕೆ, ಮತ್ತು ಸರ್ವ ವ್ಯಕ್ತಿಗೆ ಅನ್ವಯಿಸಬಹುದಾದ, ಸಂಪೂರ್ಣವಾದ ನಿರ್ದುಷ್ಟ ವ್ಯವಹಾರ ಪದ್ಧತಿ ಅಸಂಪೂರ್ಣರಾದ ಮನುಷ್ಯರಿಗೆ ಅಗಮ್ಯವಾದುದು. ಆದುದ್ದರಿಂದ ನಮ್ಮ ನಾಗರಿಕರು ಸರ್ವ ಸುಧಾರಣವಾದ ಮಾತುಗಳನ್ನಾಡುವಾಗ ವಾಸ್ತವ ಪ್ರಪಂಚದ ವ್ಯವಹಾರಾನುಕೂಲ್ಯವನ್ನು ಮರೆಯಕೂಡದು. ಮರೆತರೆ ಸಾಮಾಜಿಕ ಜೀವನದಲ್ಲಿ ತೊಡಕನ್ನುಂಟುಮಾಡುವ ಬುದ್ಧಿಭೇದವನ್ನು ಪ್ರಚುರಪಡಿಸಿದಂತಾಗುತ್ತದೆ. ಪಾಕ್ಷಿಕ ಸತ್ಯವನ್ನು, ವಿಶಿಷ್ಟ ವ್ಯವಹಾರವನ್ನು ಪ್ರತ್ಯೇಕಿಸಿ, ವಿವೇಚಿಸಿ, ಗ್ರಹಿಸುವ ಬುದ್ಧಿ ಓದುಗರಿಗಿ ಇರುವುದು ಆತ್ಯವಶ್ಯಕ.

ಅಡಿಗೆಯ ಮನೆಯ ಸೂತ್ರಧಾರಿಯಾದ ಹೆಂಗಸು ತನ್ನ ಮತ್ತು ಪತಿಪುತ್ರಾದಿಗಳ ಜೀವವನ್ನೇ ಕೈಯಲ್ಲಿ ಹಿಡಿದಿರುವವಳೆಂದರೆ ಅತಿಶಯೋಕ್ತಿಯಲ್ಲ. ಶರೀರಸ್ವಾಸ್ಥ್ಯವೇ ಮನಃಸ್ವಾಸ್ಥ್ಯಕ್ಕೆ ಆಧಾರವಾದುದರಿಂದ ಅಂಥ ಶರೀರ ಸ್ವಾಸ್ಥ್ಯಕ್ಕೆ ಅವಶ್ಯಕವಾದ ಯುಕ್ತಾಹಾರ, ಯುಕ್ತ ಪಾನೀಯ, ಯುಕ್ತ ಚಿಕಿತ್ಸೆಗಳನ್ನು ಒದಗಿಸುವ ಹೊಣೆಹೊತ್ತ ಹೆಂಗಸಿನ ಕರ್ತವ್ಯ ಅತ್ಯಂತ ಶ್ರೇಷ್ಠವೂ ಪ್ರಮುಖವೂ ಅತ್ಯವಶ್ಯಕವೂ ಆದ ಸಮಾಜಸೇವೆ, ಸ್ವಪರ ಹಿತಸಾಧನೆ ಎಂಬುದನ್ನು ನಮ್ಮ ತರುಣಿಯರು ಅರಿತುಕೊಳ್ಳಬೇಕು. ಅದರಲ್ಲಿ ಗೌರವವಿದೆಯೆಂಬುದು ಅದನ್ನು ಚೆನ್ನಾಗಿ ನಿರ್ವಹಿಸಿ ಪ್ರಿಯತಮರಿಂದ ಮೆಚ್ಚಿಕೆ ಪಡೆದ ಗರತಿಯರೆಲ್ಲರಿಗೂ ಗೊತ್ತಿದ್ದ ಸಂಗತಿ. ಕಳೆದ 'ಕರ್ಮವೀರ'ದ ಸಂಚಿಕೆಯ "ವಿಚಾರ ದ್ವಂದ್ವದಲ್ಲಿ" ಶ್ರೀಮಾನ್ ಶ್ರೀನಿವಾಸ ನರಗುಂದಕರರು ಉಲ್ಲೇಖಿಸಿದ ಕೆಲ ಸ್ತ್ರೀ ದಾಕ್ಷಿಣ್ಯಪರ ವಾಕ್ಯಗಳು ವಿಶಿಷ್ಟ ಕಾಲಕ್ಕೆ ವಿಶಿಷ್ಟಸನ್ನಿವೇಶಕ್ಕೆ, ವಿಶಿಷ್ಟ ಸ್ತ್ರೀಯರಿಗೆ ಸರಿಹೋಗುವಂಥದಲ್ಲದೆ ಸಾಮಾನ್ಯ ಸ್ತ್ರೀಗೆ ಅನ್ವಯಿಸತಕ್ಕದಲ್ಲ ಎಂಬುದು ವಿಚಾರವಂತೆಗೆ ಹೊಳೆಯದಿರಲಾರದು. ಬದಲಾದ ಇಂದಿನ ವಾತಾವರಣದಲ್ಲಿ ದುಷ್ಟವಾದ ಕೆಲ ಹಳೆಯ ಆಚಾರವಿಚಾರಗಳಿಗೆ ಅಂತ್ಯಕ್ರಿಯೆ ಎಸಗುತ್ತಿರುವಾಗಲೇ ಅಷ್ಟೇ ಅಥವಾ ಅದಕ್ಕಿಂತಲೂ ದುಷ್ಟವೆನಿಸಬಹುದಾದ ಕೆಲ ಹೊಸ ಆಚಾರ ವಿಚಾರಗಳ ಬಲೆಗೂ ಸಿಕ್ಕದಂತೆ ಜಾಗ್ರತೆ ವಹಿಸುವದು ಸ್ವತಂತ್ರ ವಿಚಾರವುಳ್ಳ ಸ್ತ್ರೀಯ ಲಕ್ಷಣವಲ್ಲವೇ?

— ಸುಭದ್ರೆ

## ಸಮಸ್ತ ಭಾರತ

### ಮುಂಬಯಿ

ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸಾಮಾಜಿಕ ಶಿಕ್ಷಣ ಪ್ರಸಾರ ಮಾಡುವದನ್ನು ಪ್ರೋತ್ಸಾಹಿಸಲು ಹಾಗು ಅದಕ್ಕೆ ಪಾರಿತೋಷಕವನ್ನೀಯಲು ಮುಂಬಯಿ ಸರಕಾರ ನಿರ್ಧರಿಸಿದೆ. ಒಂದು ವರ್ಷದಲ್ಲಿ ೧೦ ಜನರನ್ನು ಸಾಕ್ಷರರನ್ನು ಮಾಡುವ ಅಥವಾ ಇದೀ ವರುಷದಲ್ಲಿ ಎರಡು ಸಾಮಾಜಿಕ ಕೇಂದ್ರಗಳನ್ನು ಸಂಘಟಿಸುವ ಶಿಕ್ಷಕರಿಗೆ ಮತ್ತು ತನ್ನ ಕುಟುಂಬದ ಅಥವಾ ಹೊರಗಿನ ೧೦ ಜನರನ್ನು ಸಾಕ್ಷರರನ್ನಾಗಿ ಮಾಡುವ ವಿದ್ಯಾರ್ಥಿಗೆ ಪ್ರಶಸ್ತಿ ಪತ್ರವನ್ನು ಕೊಡಲಾಗುವದು. ೫ ವರ್ಷಗಳ ವರೆಗೆ ಸತತವಾಗಿ ಈ ಕಾರ್ಯ ಮಾಡುವ ಶಿಕ್ಷಕರಿಗೆ ಮೇಲ್ತರಗತಿಯ ಬಡತಿಯನ್ನು ಕೊಡಲಾಗುವದು.

ಮುಂಬಯಿ ಪ್ರಾಂತದಲ್ಲಿ ವಿಲೀನವಾದ ಜತ್ತ ಸಂಸ್ಥಾನದ ಜಿಲ್ಲಾ ಲೋಕಲ್ ಬೋರ್ಡನ್ನು ೬ ತಿಂಗಳ ವರೆಗೆ ರದ್ದುಗೊಳಿಸಲಾಗಿದೆ. ಜತ್ತದ ಅದಳತಿದಾರರು ಈ ಅವಧಿಯಲ್ಲಿ ಬೋರ್ಡಿನ ಅಧಿಕಾರವನ್ನು ವಹಿಸಿ ಕಾರ್ಯಕಲಾಪಗಳನ್ನು ಸಾಗಿಸುವರು.

ಅಹಮ್ಮದನಗರದಲ್ಲಿ ಕಳೆದ ಶನಿವಾರ ಎರಡು ಗುಂಪುಗಳಲ್ಲಿ ಬಡೆದಾಟವಾಗಿ ೫ ಜನ ಸತ್ತರಲ್ಲದೆ ೧೪ ಜನನು ಗಾಯಗೊಂಡರು. ನಗರದಲ್ಲಿ ಶಾಂತಿಯನ್ನು ಕಾಯಲು ಸೈನಿಕರನ್ನು ಕರೆಸಬೇಕಾಯಿತು. ಒಂದು ಹೋಟೆಲ್ಲು ಇದರಲ್ಲಿ ಸುಟ್ಟಿದ್ದು ೧೦ ಸಾವಿರ ರೂ. ಹಾನಿಯಾಗಿದೆ.

ಅಹಮ್ಮದನಗರದಲ್ಲಿ ನಡೆದ ಈ ಗಲಭೆಯ ಪ್ರಕರಣದಲ್ಲಿ ೩೧೪ ಜನರು ಬಂಧಿಸಲ್ಪಟ್ಟಿರುವರು. ಈಗ ಪರಿಸ್ಥಿತಿಯು ಶಾಂತವಿದ್ದು ಅಹಮ್ಮದನಗರ ವಿಸಾಪುರಗಳ ನಡುವಿನ ರೇಲ್ವೆ ಓಡಾಟವನ್ನು ಪೋಲೀಸರ ಕಾವಲಿನಲ್ಲಿ ಪ್ರಾರಂಭಿಸಲಾಗಿದೆ.

ಉಗಿಬಂಡಿಯು ಕಲ್ಯಾಣಗಳ ಮೇಲೆ ಹಿಂತು ಪ್ರಯಾಣ ಮಾಡುತಿರುವಾಗ ಕಲ್ಯಾಣ ಇಗತಪುರಿಗಳ ಮಧ್ಯದಲ್ಲಿ ೬ ಜನರು ಪ್ರಾಣಕ್ಕೆರವಾದರು.

ಬೆಲ್ಜಿಯಮದಲ್ಲಿ ಜೂನ ೧೯ ರಿಂದ ಜುಲೈ ೧೦ ರ ವರೆಗೆ ನಡೆಯಲಿರುವ ಚಲಚ್ಚಿತ್ರ ಮತ್ತು ಲಲಿತಕಲೆಗಳ ಪ್ರದರ್ಶನದಲ್ಲಿ ಭಾಗವಹಿಸಲು ಭಾರತ ಸರಕಾರಕ್ಕೆ ಆಮಂತ್ರಣ ಬಂದಿದ್ದು ಭಾರತ ಸರಕಾರದ ಸುದ್ದಿ ಶಾಖೆಯ ಚಲಚ್ಚಿತ್ರ ವಿಭಾಗದವರು ಕೆಲ ವಸ್ತುಗಳನ್ನು ಪ್ರದರ್ಶನಕ್ಕೆ ಕಳಿಸಲಿರುವರು.

ಪಂಢರಪುರ ನಗರ ಸಭೆಯ ಅಧಿಕಾರಾವಧಿಯನ್ನು ನವಂಬರದ ವರೆಗೆ ಬೆಳೆಯಿಸಿದ್ದಾರೆ. ಜೂನ ೧೯ ಕ್ಕೆ ಇದು ಮುಗಿಯುತಿದ್ದಿತು.

ಮುಂಬಯಿ ಸಾಮಾನ್ಯ ಮತದಾರ ಸಂಘದಿಂದ ಘಟನಾ ಸಮಿತಿಯ ಉಪಚುನಾವಣೆಗೆ ಶ್ರೀ. ಶಾಂತಿಲಾಲ ಶಹಾ ಇವರೊಬ್ಬರೆ ನಾಮಪತ್ರವನ್ನು ಕೊಟ್ಟಿರುವರು. ಆದುದರಿಂದ ಇವರು ಅವಿರೋಧವಾಗಿ ಆರಿಸಲ್ಪಟ್ಟರೆಂದು ಘೋಷಿಸಲಾಗುವದು. ಸರ್ ಎಚ್. ಪಿ. ಮೋದಿಯವರು ಗವರ್ನರರಾಗಿ ನೇಮಿಸಲ್ಪಟ್ಟದ್ದರಿಂದ ತೆರವಾದ ಸ್ಥಳಕ್ಕೆ ಈ ಉಪಚುನಾವಣೆ ನಡೆಯುವದು.

ಇದೇ ಅಗಷ್ಟ ೧೫ ರಂದು ಹಿಂದುಸ್ತಾನದ ಸ್ವಾತಂತ್ರ್ಯಪ್ರಾಪ್ತಿಯ ದ್ವಿತೀಯ ವಾರ್ಷಿಕೋತ್ಸವದದಿನ ಮುಂಬಯಿ ಸರಕಾರದ ಅರಣ್ಯಾಭಿವೃದ್ಧಿ ಯೋಜನೆಗನುಗುಣವಾಗಿ ೧೦ ಲಕ್ಷ ಮರಗಳ ಸಸಿಗಳನ್ನು ಪುಕ್ಕಟೆಯಾಗಿ ಹಂಚಲಿದೆ. ವಿಲೀನವಾದ ಸಂಸ್ಥಾನಗಳಲ್ಲಿ ೫೦೦೦ ಚದರು ಮೈಲು ಪ್ರದೇಶದಲ್ಲಿ ಅಡವೆಯನ್ನು ಬೆಳೆಸಬೇಕೆಂದು ನಿರ್ಣಯಿಸಲಾಗಿದೆ. ಕಾಗದ ಕಾರಖಾನೆ ತೆರೆಯುವ ಖಾಸಗಿ ಕಂಪನಿಗೆ ಸರಕಾರವು ಸಹಾಯ ನೀಡುವದೆಂದು ಮಂತ್ರಿವರ್ಯ ಪಾಟೀಲ ಮಲ್ಲನಗೌಡರು ಹೇಳಿದರು.

ನಿವೃತ್ತ ರೇಲ್ವೆ ಅರ್ಥಿಕ ಕಮೀಶನರರಾದ ಶ್ರೀ ಟಿ. ಎಸ್. ಶಂಕರ ಅಯ್ಯರರು ಮುಂಬಯಿ ಪೋರ್ಟ ಟ್ರಸ್ಟಿನ ಪುನರ್ಘಟನಾಧಿಕಾರಿಗಳೆಂದು ನೇಮಕ ಹೊಂದಿರುವರು. ಇದೇ ಜುಲೈ ಮಧ್ಯದೊಳಗಾಗಿ ಅವರು ತಮ್ಮ ಈ ಅಧಿಕಾರವನ್ನು ವಹಿಸಿಕೊಳ್ಳುವರೆಂದು ತಿಳಿಯುತ್ತದೆ.

ನಮ್ಮ ನಿರೀಕ್ಷೆಗಿಂತ ಹೆಚ್ಚು ಅಂದರೆ ಎರಡು ಪಟ್ಟಿನಷ್ಟು ಆಹಾರ ಧಾನ್ಯವನ್ನು ಸರಕಾರವು ರೈತರಿಂದ ಕೊಂಡಿದ್ದರೂ ಎರಡು ಲಕ್ಷ ಟನ್ನ ಆಹಾರ ಧಾನ್ಯದ ಕೊರತೆಯಾಗಬಹುದೆಂದೂ ಕೇಂದ್ರ ಸರಕಾರದ ಸಹಾಯದಿಂದ ಇದನ್ನು ತುಂಬಿಕೊಳ್ಳಲಾಗುವದೆಂದೂ ಮಂತ್ರಿವರ್ಯ ದಿನಕರರಾಯರು ಹೇಳಿದರು.

### ಹೊಸದಿಲ್ಲಿ

ಪಾಕಿಸ್ತಾನ ಮತ್ತು ಅಫಗಾನಿಸ್ತಾನಗಳ ನಡುವೆ ನಡೆದಿರುವ ಕಿತ್ತಾಟದ ವಿಚಾರದಲ್ಲಿ ಹಿಂದುಸ್ತಾನದಲ್ಲಿ ನಡೆದ ಪ್ರಚಾರವನ್ನು ಕುರಿತು ಪಾಕಿಸ್ತಾನ ಸರಕಾರವು ಹಿಂದುಸ್ತಾನ ಸರಕಾರಕ್ಕೆ ಪ್ರತಿಭಟನಾ ಪತ್ರವನ್ನು ಬರೆದಿದೆಯೆಂದು ತಿಳಿಯುತ್ತದೆ. ಎರಡೂ ದೇಶಗಳ ವೈಮನಸ್ಸಿಗೆ ಕಾರಣವಾಗುವ ಪ್ರಚಾರ ಕೈಕೊಳ್ಳಬಾರದೆಂದು ಗೊತ್ತಾಗಿದ್ದು ಈಗ ನಡೆದಿರುವ ಪ್ರಚಾರವು ಅದಕ್ಕೆ ವಿರೋಧಕವಾಗಿದೆಯೆಂದು ಅವರ ವಾದವಿದೆ.

ಬ್ಯಾಂಕಿಂಗ ಕಂಪನಿಗಳ ವ್ಯಾಜ್ಯವನ್ನು ಬಗೆಹರಿಸಲು ಹಿಂದುಸ್ತಾನ ಸರಕಾರವು ಒಂದು ಔದ್ಯೋಗಿಕ ನ್ಯಾಯ ಮಂಡಲವನ್ನು ನೇಮಿಸಿದೆ. ಮುಂಬಯಿ ಹಾಯಕೋರ್ಟಿನ ನಿವೃತ್ತ ನ್ಯಾಯಾಧೀಶರಾದ ಶ್ರೀ ಕೆ. ಸಿ. ಸೇನ ಇವರು ಅದರಅಧ್ಯಕ್ಷರಾಗಿದ್ದು ಪಾಟಣಾ ಹಾಯಕೋರ್ಟಿನ ನಿವೃತ್ತನ್ಯಾಯಾಧೀಶ ಎಸ್. ಪಿ. ವರ್ಮ ಮತ್ತು ಕಲಕತ್ತೆ ಹಾಯಕೋರ್ಟಿನ ನಿವೃತ್ತ ನ್ಯಾಯಾಧೀಶ ಜಿ. ಎನ್. ಮುಜುಮದಾರರು ಮಂಡಲದ ಸದಸ್ಯರಾಗಿರುವರು.

ದಿಲ್ಲಿ ರೆಸಿಡೆಂಟ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಪ್ರಾರಂಭವಾದ ಡಾ. ರಾಮ ಮನೋಹರ ಲೋಹಿಯಾ ಇವರ ಖಟ್ಲೆಯ ವಿಚಾರಣೆಯಲ್ಲಿ ಪಂಡಿತ ಜವಾಹರಲಾಲ ಮೊದಲಾದವರ ಸಾಕ್ಷಿಯಾಗಬೇಕೆಂದು ಲೋಹಿಯಾ ಇವರು ಪ್ರತಿಪಾದಿಸಿದರು.

ಗಾಂಧಿ ನಿಧಿಯ ಲೆಕ್ಕಪತ್ರವನ್ನು ತೀವ್ರ ಮುಗಿಸಿ ಪ್ರಸಿದ್ಧಿಸಬೇಕಾಗಿರುವದರಿಂದ ಇನ್ನು ಕಾಲವಿಲಂಬ ಮಾಡದೆ ಸಂಬಂಧಿಸಿದವರೆಲ್ಲ ಕೂಡಲೆ ಲೆಕ್ಕವನ್ನು ಒಪ್ಪಿಸಬೇಕೆಂದು ಮುಂತಾಗಿ ನಿಧಿ ಸಮಿತಿಯ ಆಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಪ್ರಸಿದ್ಧಿಸುತ್ತಾರೆ.

ರಾಜ ಘಟನೆಯ ಕರಡಿನ ಭಾಷಾಂತರವು ಇಂಗ್ಲಿಶಿನಷ್ಟೇ ಸಮರ್ಪಕವಾಗಿ ಸಿದ್ಧವಾಗಬೇಕಾದರೆ ಮೊದಲು ರಾಷ್ಟ್ರಭಾಷೆಯ ಪ್ರಶ್ನೆಯನ್ನು ತೀರ್ಮಾನಿಸುವದು ಅವಶ್ಯವಾಗಿದೆಯೆಂದು ಘಟನಾ ಸಮಿತಿಯ ಕಾಂಗ್ರೆಸ ಪಕ್ಷದ ಸಭೆಯಲ್ಲಿ ಚರ್ಚೆಯೆದ್ದುದರಿಂದ ಭಾಷಾಂತರದ ಪರಿಶೀಲನೆ ಮುಂತಾದ್ದರ ಬಗ್ಗೆ ೨೫ ಜನರ ಸಮಿತಿಯೊಂದನ್ನು ನೇಮಿಸಬೇಕೆಂಬ ವಿಷಯವು ಇತ್ಯರ್ಥಕ್ಕೆ ಬಾರದೆ ಮುಂದೆ ಬಿದ್ದಿತು.

ಗಾಂಧೀ ಕೊಲೆಯ ಖಟ್ಲೆಯ ಅಪೀಲಿನ ನಿರ್ಣಯವು ಜೂನ ೨೪ ಕ್ಕೆ ಹೇಳಲಾಗುವದೆಂದು ತಿಳಿಯುತ್ತದೆ.

ಮಾಲೇರಕೊಟಲಾ ಪೋಲೀಸ ಇನಸ್ಪೆಕ್ಟರರಾದ ಕುಲದೀಪಸಿಂಗ ಕೊತವಾಲ ಇವರ ಮೇಲೆ ಮೊಂಬಿ ಎದ್ದು ಜನರು ದಾಳಿಮಾಡಿ ಕೊಲೆ ಮಾಡಿದ್ದಾರೆಂದು ತಿಳಿಯುತ್ತದೆ.

ಹಿಂದುಸ್ತಾನ ಸರಕಾರವು ತಾಳಿದ ತಪ್ಪು ಧೋರಣೆಯಿಂದ ಉಂಟಾದ ಅರ್ಥಿಕ ದುಃಸ್ಥಿತಿಯನ್ನು ಹೋಗಲಾಡಿಸಿ ದೇಶದ ಅರ್ಥಿಕ ಜೀವನವನ್ನು ಪುನರ್ಘಟಿಸಲು ಮುಖ್ಯಮಂತ್ರಿಗಳು ಪ್ರಾತಿನಿಧಿಕ ಅರ್ಥಿಕ ಪರಿಷತ್ತನ್ನು ಕರೆಯಬೇಕೆಂದು ಹಿಂದ ಮಜದೂರ ಸಭೆಯ ಕಾರ್ಯದರ್ಶಿಗಳಾದ ಶ್ರೀ ಅಶೋಕ ಮೇಥಾ ಇವರು ಪ್ರಕಟನೆಯ ಮೂಲಕ ಸೂಚನೆ ಮಾಡಿದ್ದಾರೆ.

ಹೊಸ ಘಟನೆಯು ಅಸ್ತಿತ್ವದಲ್ಲಿ ಬಂದ ಅನಂತರ ಹಿಂದುಸ್ತಾನ ಪ್ರಜಾರಾಜ್ಯದ ಅಧ್ಯಕ್ಷಪದಕ್ಕಾಗಿ ಡಾ. ರಾಜೇಂದ್ರಪ್ರಸಾದ ಮತ್ತು ಚಕ್ರವರ್ತಿ ರಾಜಗೋಪಾಲಾಚಾರ್ಯರಲ್ಲಿ ಸ್ಪರ್ಧೆ ನಡೆಯಲಿದೆಯೆಂದು ಹೊರಟ ಸುದ್ದಿಯಲ್ಲಿ ಹುರುಳಿಲ್ಲೆಂದೂ ಇಬ್ಬರಲ್ಲಿ ಸ್ಪರ್ಧೆಯಾಗುವದು ಶಕ್ಯವಿಲ್ಲವೆಂದೂ ಇಂಥ ಸುದ್ದಿಗಳಿಗೆ ಯಾರೂ ಮೋಸ ಹೋಗಬಾರದೆಂದೂ ಘಟನಾ ಸಮಿತಿಯ ಅಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಒಂದು ಹೇಳಿಕೆಯನ್ನು ಕೊಟ್ಟಿರುವರು.

---

ದಿಲ್ಲಿಯಲ್ಲಿಇದ್ದಾಗ ತಮ್ಮ ಮೋಟರುಗಳ ನಂಬರುಗಳನ್ನು ತಿಳಿಸುವ ಹಲಗೆಗಳನ್ನುಹಿಂದಿಯಲ್ಲಿಬರೆದಿದ್ದಕ್ಕಾಗಿತಮ್ಮ ಅಧಿಕಾರಿಗಳಮೇಲೆ ಖಟ್ಲೆ ಹಾಕಿದ ವಿಚಾರವನ್ನು ಕುರಿತು ಯುಕ್ತ ಪ್ರಾಂತ ಸರಕಾರವು ಪ್ರತಿಭಟಿಸಿ ಹಿಂದುಸ್ತಾನ ಸರಕಾರಕ್ಕೆ ಪತ್ರ ಬರೆದಿದೆ. ಈ ಖಟ್ಲೆಗೆ ಗುರಿಯಾದವರಲ್ಲಿ ಯುಕ್ತಪ್ರಾಂತ ಸರಕಾರದ ಪಾರ್ಲಮೆಂಟರಿ ಸೆಕ್ರೆಟರಿಗಳೂ ಘಟನಾ ಸಮಿತಿಯ ಸದಸ್ಯರೂ ಇರುವರು.

### ಪಶ್ಚಿಮ ಬಂಗಾಲ

ಭಾರತೀಯರ ಬಗೆಗೆ ಪಾಕಿಸ್ತಾನದ ನೀತಿಯು ದ್ವೇಷಕವಾಗಿ ಸಾಗುತ್ತಿದ್ದ ಪ್ರಜೆಗಳು ಕಲಕತ್ತೆಯ ಬುದ್ಧ ಧರ್ಮಾಂಕರ ಸಭೆಗೆ ಸಯಾಮೀ ಗೌತಮಬುದ್ಧನ ಪ್ರತಿಮೆಯನ್ನು ಕಾಣಿಕೆಯಾಗಿ ಅರ್ಪಿಸಲಿರುವರೆಂದು ತಿಳಿಯುತ್ತದೆ. ಈ ಪ್ರತಿಮೆಯು ಜುಲೈ ಮೊದಲ ವಾರದಲ್ಲಿ ಕಲಕತ್ತೆಯನ್ನು ತಲುಪುವದು.

ಕಳೆದ ಫೆಬ್ರುಅರಿಯಲ್ಲಿ ಕಲಕತ್ತೆಯ ದಂಡಂ ಶುರಂಗಧಲ್ಲಿ ನಡೆದ ಶಸ್ತ್ರ ದಾಳಿಯ ಸಂಬಂಧದಲ್ಲಿ ಪೋಲೀಸರಿಗೆ ಬೇಕಾಗಿದ್ದ ಇಬ್ಬರು ಸುಂಡರನ್ನು ಹಿಡಿಯಹೋದಾಗ ಅವರು ಪಿಸ್ತೂಲು ಹಾರಿಸಿ ಮೂವರನ್ನು ಗಾಯಗೊಳಿಸಿ ಮತ್ತೆ ಫರಾರಿಯಾದರು.

ಬಂಗಾಲ ಶಾಸನಸಭೆಯ ಉಪಚುನಾವಣೆಯಲ್ಲಿ ಶ್ರೀ ಶರತ್ಚಂದ್ರ ಬೋಸರು ೧೯೦೩೦ ಮತಗಳನ್ನು ಪಡೆದು ವಿಜಯಿಗಳಾದರು. ಕಾಂಗ್ರೆಸ್ಸಿನ ಶ್ರೀ ಸುರೇಶಚಂದ್ರ ದಾಸರಿಗೆ ೫೭೮೦, ದಿಲೀಪಕುಮಾರ ರಾಯರಿಗೆ ೫೧, ಎಸ್. ಸಿ. ರಾಯರಿಗೆ ೧೩ ಮತಗಳು ಬಿದ್ದಿವೆ. ಈ ಚುನಾವಣೆ ಒಳ್ಳೆ ತುರಸಿನಿಂದ್ಯನಡೆಯಿತು. ಕಾಂಗ್ರೆಸ್ಸಿನವರು ಕೂಡಿಸಿದ್ದ ಪ್ರಚಾರ ಸಭೆಗಳಲ್ಲಿ ಗೊಂದಲ ಮೊದಲಾದ್ದು ನಡೆಯಿತು.

ಕಲಕತ್ತೆಯಲ್ಲಿ ೩೦೦ ಜನ ಕಮ್ಯುನಿಸ್ಟರು ದೇಶೀಬಾಂಬು ತಿವಿಗತ್ತಿ, ಆ್ಯಸಿಡಬಲ್ಬು ಮತ್ತು ಕೈಬಾಂಬುಗಳಿಂದ ಸುಸಜ್ಜಿತರಾದ ೩೦೦ ಜನ ಕಮ್ಯುನಿಸ್ಟರು ಪಶ್ಚಿಮ ಬಂಗಾಲ ಪ್ರಾಂತೀಯ ಕಾಂಗ್ರೆಸ ಸಮಿತಿಯ ಹೊಸ ಅಧ್ಯಕ್ಷರಾದ ಶ್ರೀ ಸುರೇಂದ್ರ ಮೋಹನ ಘೋಷರ ಮನೆಯ ಮೇಲೆ ದಾಳಿಮಾಡಿದ್ದರಿಂದ ಕೆಲವರಿಗೆ ಗಾಯಗಳಾಗಿವೆ. ದಾಳಿಗಾರರು ಟೆಲಿಫೋನುಗಳನ್ನು ಕಿತ್ತಿಹಾಕಿ ಬಾಗಿಲನ್ನು ಮುರಿದು ಒಳಹೊಕ್ಕು ಬಾಂಬುಗಳನ್ನು ಪ್ರಯೋಗಿಸಿದರು.

ಇದೇ ಕಾಲಕ್ಕೆಪ್ರಾಂತೀಯಕಾಂಗ್ರೆಸ ಸಮಿತಿಯ ಓರ್ವ ಪ್ರಮುಖ ಸದಸ್ಯರಾಗಿರುವ ಡಾ. ಪ್ರತಾಪಚಂದ್ರ ಗುಹರಾಯ ಇವರ ಮನೆಯ ಮೇಲೂ ದಾಳಿಯಾಗಿ ಶ್ರೀಮತಿ ಗುಹರಾಯ ಇವರ ಮೇಲೆ ಆ್ಯಸಿಡ್‌ಬಲ್ಬು ಒಗೆದು ಗಾಯಗೊಳಿಸಲಾಯಿತೆಂದು ತಿಳಿಯುತ್ತದೆ.

ಪ್ರಾಂತೀಯ ಕಾಂಗ್ರೆಸ ಕಚೇರಿಯ ಕೆಲ ಸಾಮಾನುಗಳು ಕಾಗದ ಪತ್ರಗಳು ಕಳವಾಗಿ ಹೋಗಿವೆ. ಹೊಸ ಅಧ್ಯಕ್ಷ ಮತ್ತು ಕಾರ್ಯದರ್ಶಿಗಳ ಆಯ್ಕೆಯಾದನಂತರ ಈ ಪ್ರಕರಣ ನಡೆಯಿತಂತೆ,

ಈಸ್ಟ ಇಂಡಿಯನ್ ರೇಲ್ವೆಯಲ್ಲಿ ಹೌರಾ ಕಾಟ್ವಾಗಳ ನಡುವೆ ದೈನ್ಹಾಟೆ ಎಂಬಲ್ಲಿ ೧೪ ನೇ ತಾರೀಕು ಬೆಳಿಗ್ಗೆ ಉಗಿಬಂಡಿಯೊಂದು ಹಳಿಬಿಟ್ಟು ಸರಿದ ಮೂಲಕ ಅಪಘಾತ ಸಂಭವಿಸಿ ಓರ್ವನು ಮೃತನಾದನಲ್ಲದೆ ಬೇರೆ ಹನ್ನೊಂದು ಜನರು ಗಾಯಗೊಂಡರು. ಗಾಯಾಳುಗಳನ್ನು ಆಸ್ಪತ್ರೆಗೆ ಸಾಗಿಸಲಾಗಿದೆ.

### ಮದರಾಸ

ಪತ್ರಿಕೆಗಳ ಮೇಲಿನ ಜಾಹೀರಾತುಗಳ ಕರವನ್ನು ರದ್ದುಪಡಿಸಬೇಕೆಂದು ಆಂಧ್ರ ಪತ್ರಿಕೋದ್ಯೋಗಿ ಪರಿಷತ್ತಿನವರು ಗೊತ್ತುವಳಿ ಸ್ವೀಕರಿಸಿದ್ದಾರೆ.

ಚಂದ್ರನಗರ ಪಾಂಡಿಚೆರಿ ಮತ್ತು ಹಿಂದುಸ್ತಾನದಲ್ಲಿಯ ಇನ್ನಿತರ ಫ್ರೆಂಚ ವಸಾಹತುಗಳು ಹಿಂದುಸ್ತಾನದಲ್ಲಿ ಸಮಾವೇಶವಾಗಬೇಕು ಮತ್ತು ಹಿಂದುಸ್ತಾನವು ಇಡೀ ಜಗತ್ತಿನಲ್ಲಿ ಸಾತ್ವಿಕ ವಿಷಯಗಳಲ್ಲಿ ಧುರೀಣತ್ವವನ್ನು ವಹಿಸಬೇಕು ಎಂಬುದು ಶ್ರೀ ಅರವಿಂದರ ಅಭಿಪ್ರಾಯವಾಗಿದೆಯೆಂದೂ ಹಿಂದುಸ್ತಾನದಲ್ಲಿ ಫ್ರೆಂಚರ ಅಧಿಕಾರ ಮುಂದುವರಿಯುವದಕ್ಕೆ ಅರವಿಂದಾಶ್ರಮದವರಾರೂ ಒಪ್ಪುವದಿಲ್ಲೆಂದೂ ಆಶ್ರಮದ ವಕ್ತಾರನೊಬ್ಬನು ಹೇಳಿದನು.

ಮದರಾಸ ಸಹಕಾರಿ ಹೌಸಿಂಗ ಸೊಸಾಯಿಟಿಯ ಆಶ್ರಯದಲ್ಲಿ ರಚಿತವಾದ ಅಶಿಯಾ(?)ದಲ್ಲಿಯ ಗಾಂಧೀ ನಗರದ ಪ್ರಾರಂಭೋತ್ಸವವನ್ನು ಕಾಂಗ್ರೆಸ ಅಧ್ಯಕ್ಷರಾದ ಡಾ. ಪಟ್ಟಾಭಿಯವರು ೧೩ ಕ್ಕೆ ನೆರವೇರಿಸಿದರು. ಇದರ ವಿಸ್ತಾರ ೧೩೭ ಎಕರೆ ಇದೆ. ಇದರಲ್ಲಿ ಒಟ್ಟು ೪೦೦ ಮನೆಗಳನ್ನು ಕಟ್ಟಲಿದ್ದು ಈಗಾಗಲೆ ೮೦ ಮನೆಗಳನ್ನು ಕಟ್ಟಲಾಗಿದೆ. ಈ ಸಂಘದಲ್ಲಿ ೨೩ ಲಕ್ಷ ರೂ. ಗಳಷ್ಟು ಪಾಲುಗಾರಿಕೆಯ ಹಣವಿದೆ. ಮದ್ರಾಸ ಅರ್ಥಖಾತೆಯಿಂದ ೧೬ ಲಕ್ಷ ರೂಪಾಯಿಗಳ ಈ ಸಾಲವನ್ನು ಕೊಂಡಿದೆ.

ಚಲಚ್ಚಿತ್ರ ಪ್ರದರ್ಶನಗಳ ಮೇಲೆ ೨ ರಿಂದ ೫ ರೂ. ಗಳ ವರೆಗೆ ಕರ ಹೇರಬೇಕೆಂಬ ಮಸೂದೆ ಪರಿಶೀಲಕ ಸಮಿತಿಗೆ ಒಪ್ಪಿಸಲಾಯಿತು. ಇದರಿಂದ ೧೪ ಲಕ್ಷ ರೂ. ಮದರಾಸ ಸರಕಾರಕ್ಕೆ ಬರುವದು.

### ಹೈದರಾಬಾದ

ಹೈದರಾಬಾದಿನ ಮಿಲಿಟರಿ ಗವರ್ನರರಾದ ಮೇಜರ ಜ. ಚೌಧರಿಯವರು ಮುಖ್ಯ ಮಂತ್ರಿಗಳನ್ನು ಕಾಣಲು ದಿಲ್ಲಿಗೆ ಹೋಗಿದ್ದರು. ಸರಕಾರಿ ವಿಷಯಗಳ ಬಗ್ಗೆ ಅವರು ಪಂಡಿತ ನೆಹರು ಇವರೊಡನೆ ಮಾತಾಡಿದರಂತೆ. ದೆಹರಾಡೂನಿಗೆ ಹೋಗಿ ಉಪ ಮುಖ್ಯ ಮಂತ್ರಿ ಸರದಾರ ವಲ್ಲಭಭಾಯಿ ಪಟೇಲರೊಡನೆಯೂ ಅವರು ಚರ್ಚೆ ಮಾಡಿದರು.

ಹಿಂದುಸ್ತಾನ ಸರಕಾರದ ಮಂತ್ರಿಮಂಡಲದ ಮಂತ್ರಿಗಳಾದ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರ ಇವರು ತಮ್ಮ ಬೆಂಗಳೂರ ಪ್ರವಾಸದಲ್ಲಿ ನಡುವೆ ಕೆಲವು ಗಂಟೆಗಳ ವರೆಗೆ ಹೈದರಾಬಾದದಲ್ಲಿ ತಂಗುವರೆಂದೂ ಆಗ ಹೈದ್ರಾಬಾದ ಕಾಂಗ್ರೆಸ್ಸಿನ ಅಧ್ಯಕ್ಷರಾದ ಸ್ವಾಮಿ ರಮಾನಂದ ತೀರ್ಥರೊಡನೆ ಕೆಲ ವೇಳೆ ಕಳೆಯುವರೆಂದೂ ತಿಳಿಯುತ್ತದೆ.

ಹೈದರಾಬಾದ ಸಂಸ್ಥಾನದಲ್ಲಿಯ ಜಾಗೀರಗಳನ್ನೆಲ್ಲ— ರದ್ದುಪಡಿಸಲು ಪರಿಣಾಮಕಾರಿಯಾದ ಕ್ರಮ ಕೈಕೊಳ್ಳಬೇಕೆಂದು ಸ್ವಾಮಿ ರಮಾನಂದತೀರ್ಥರು ಮೇಜರ ಜನರಲ್ ಚೌಧರಿಯವರನ್ನು ಭೆಟ್ಟಿಯಾಗಿ ಹೇಳಿದರು. ಮೆಹಬೂಬ ನಗರದ ಸಂಚಾರದಲ್ಲಿ ಇತ್ತೀಚೆಗೆ ಬಂದ ಅನುಭವಗಳನ್ನೂ ಅವರು ಮಿಲಿಟರಿ ಗವರ್ನರರಿಗೆ ತಿಳಿಸಿದರು,

ತಾವು ಸಂಸ್ಥಾನ ಕಾಂಗ್ರೆಸ್ ಅಧ್ಯಕ್ಷಪದಕ್ಕೆ ಸ್ಪರ್ಧಿಸುವದಿಲ್ಲೆಂಬ ಹಬ್ಬಿದ ಸುದ್ದಿಯು ನಿರಾಧಾರವಾಗಿದೆಯೆಂದೂ ತಾವು ಆ ಬಗ್ಗೆ ಇನ್ನೂ ಯಾವದೇ ಬಗೆಯ ನಿರ್ಧಾರ ತೆಗೆದುಕೊಂಡಿಲ್ಲೆಂದೂ ಸ್ವಾಮೀ ರಮಾನಂದ ತೀರ್ಥರು ಪ್ರಸಿದ್ಧಿಸಿದ್ದಾರೆ.

# ಭಾರತದಲ್ಲಿ ಪಶುವೈದ್ಯರು

ಭಾರತಕ್ಕೆ ಪಶುವೈದ್ಯನ ಮಹತ್ವ ಎಷ್ಟೆಂದು ತೂಗಬೇಕಾದರೆ ಈ ದೇಶದ ಉತ್ಪನ್ನದಲ್ಲಿ ಮೂರರಲ್ಲಿ ಎರಡಂಶದಷ್ಟು ಪಶುಗಳಿಂದಲೇ ಆಗುವದೆಂದು ಅರಿತರೆ ಸಾಕು. ತಜ್ಞರ ಲೆಕ್ಕಾಚಾರದಂತೆ ನಿಷ್ಪ್ರಯೋಜಕ ಪಶುಗಳನ್ನು ಸಾಕಲು ನಾವು ೧೮೦ ಕೋಟಿ ರೂಪಾಯಿಗಳನ್ನು ಹಾಳುಮಾಡುತ್ತಿದ್ದರೂ ಈ ಸ್ಥಿತಿ. ಪಶುತಜ್ಞರು ಮಾತ್ರ ಈ ಪಶುಗಳನ್ನು ಸುಧಾರಿಸಿ ಈ ಅಪಾರ ವ್ಯಯವನ್ನುಳಿಸಬಲ್ಲರಲ್ಲದೆ, ಈ ನಿಷ್ಪ್ರಯೋಜಕ ಪ್ರಾಣಿಗಳನ್ನು ಪ್ರಯೋಜಕವಾಗಿ ಮಾಡಿ ಅಪಾರ ಲಾಭವನ್ನೂ ಮಾಡಿಕೊಡಬಲ್ಲರು.

ನಮ್ಮದು ಕೃಷಿಪ್ರಧಾನ ದೇಶ. ಕೃಷಿಯೂ ದನಕರುಗಳೂ ಅಕ್ಕತಂಗಿ ಇದ್ದಂತೆ. ಅವು ಅನ್ಯೋನ್ಯಾಶ್ರಯವಾಗಿವೆಯಲ್ಲದೆ ಒಂದನ್ನು ಬಿಟ್ಟು ಇನ್ನೊಂದು ಸಾಗಲಾರದು. ಕೃಷಿಯು ಏಳಿಗೆಯಾಗಬೇಕಾದರೆ ಕಾರ್ಯಕ್ಷಮವಾದ ಶ್ರಮಶಕ್ತಿ ಅವಶ್ಯ. ಈ ಚಾಲಕ ಶಕ್ತಿಯು ಮುಖ್ಯ ಅಕರವೇ ಎತ್ತು. ಎತ್ತನ್ನು ಬಿಟ್ಟರೆ ಅಥವಾ ಅದನ್ನು ಅಸಮರ್ಥವಾಗಗೊಟ್ಟರೆ ಕೃಷಿಗೇ ಉಳಿಗಾಲವಿಲ್ಲ. ಪಶುವೈದ್ಯರಿಗೆ ಇಲ್ಲಿ ಅದ್ವಿತೀಯ ಸ್ಥಾನವಿದೆ.

ಮಕ್ಕಳಿಗೂ ದೊಡ್ಡವರಿಗೂ ಪ್ರಕೃತಿದತ್ತವಾದ ಶ್ರೇಷ್ಠವೂ ಪರಿಪೂರ್ಣವೂ ಹಿತವೂ ಆದ ಆಹಾರವೆಂದರೆ ಹಾಲು. ಅದು ಪಶುಗಳಿಂದ ದೊರಕುತ್ತದೆ. ಆದರೆ ಡೆನ್ಮಾರ್ಕನಲ್ಲಿ ದನಗಳು ಸರಾಸರಿ ದಿನಕ್ಕೆ ಒಂಬತ್ತು ಸೇರು ಹಾಲು ಕರೆಯುತ್ತಿರುವಾಗ ನಮ್ಮ ದನಗಳು ಸರಾಸರಿ ಒಂದು ಸೇರಿಗಿಂತಲೂ ಕಡಿಮೆ ಹಿಂಡುತ್ತವೆ. ಕಳೆದ ಯುದ್ಧಕ್ಕಿಂತ ಮೊದಲು ನಾವು ೧೮ ಕೋಟಿ ಪಶುಗಳಿಂದ ಪಡೆಯುತ್ತಿದ್ದಷ್ಟೇ ಹಾಲನ್ನು ಜರ್ಮನಿಯಲ್ಲಿ ಎರಡೂವರೆ ಕೋಟಿ ಅಮೇರಿಕೆಯಲ್ಲಿಮೂರುವರೆ ಕೋಟಿ, ಬ್ರಿಟನ್ನಿನಲ್ಲಿ ಏಳೂವರೆ ಕೋಟಿ ಮತ್ತು ರಶಿಯದಲ್ಲಿ ಏಳೇ ಕೋಟಿ ದನಗಳು ಕೊಡುತ್ತಿದ್ದವೆಂದು ತಿಳಿದರೆ ನಾವು ನಾಚಿಕೊಳ್ಳಬೇಕಾಗಿದೆ. ಇಂದು ಭಾರತದಲ್ಲಿ ಹಿಂಡುವ ದನಗಳು ಸರಾಸರಿ ಕೊಡುವಷ್ಟೇ ಹಾಲನ್ನು ಒಂದು ಕಾಲದಲ್ಲಿ ಡೆನ್ಮಾರ್ಕಿನ ದನಗಳೂ ಸಾಮಾನ್ಯವಾಗಿ ಕೊಡುತ್ತಿದ್ದವು. ಆಗಿಂದ ಅವರು ದನಗಳ ಆರೈಕೆಯನ್ನು ಸುಧಾರಿಸತೊಡಗಿದರು. ಈ ಐವತ್ತು ವರ್ಷಗಳೊಳಗೆ ಅಲ್ಲಿಯ ಸಾಮಾನ್ಯ ದನವೊಂದು ಕೊಡುವ ಬೆಣ್ಣೆಯ ಪ್ರಮಾಣ ವರ್ಷಕ್ಕೆ೬೮ಪೌಂಡಿನಿಂದ೩೪೯ಪೌಂಡಿಗೆ,ಅಂದರೆ ಹದಿನಾಲ್ಕರಷ್ಟು ಏರಿದೆ. ಅದೇ ಪ್ರಕಾರ ಬೇರೆ ದೇಶಗಳಲ್ಲಿಯೂ ಎದ್ದು ಕಾಣುವ ಸುಧಾರಣೆಯಾಗಿದೆ. ಇತರ ದೇಶಗಳ ದನಗಳಷ್ಟೇ ಹಾಲನ್ನು ನಮ್ಮವುಗಳೂ ಕೊಡಲಾರವೆಂದು ನಂಬಲು ಕಾರಣವೇನೂ ಇಲ್ಲ.

ಜಗತ್ತಿನಲ್ಲಿರುವ ದನಕರುಗಳಲ್ಲಿ ಮೂರರ ಲ್ಲೊಂದರಷ್ಟು ಭಾರತದಲ್ಲಿವೆಯಾದರೂ ಇಲ್ಲಿ ತಲಾ ಹಾಲಿನ ಬಳಕೆ ೭ ಔಂಸು ಆಗಿದೆ. ಅದೇ ಫ್ರಾನ್ಸಿನಲ್ಲಿ ತಲಾ ೩೦ ಔಂಸು, ಅಮೇರಿಕೆಯಲ್ಲಿ ೩೫ ಔಂಸು, ಬ್ರಿಟನ್ನಿನಲ್ಲಿ ೪೯ ಔಂಸು, ನಾರ್ವೆಯಲ್ಲಿ ೪೩ ಔಂಸು ಮತ್ತು ನ್ಯೂಝಿಲಂಡಿನಲ್ಲಿ ೫೬ ಔಂಸು ಹಾಲನ್ನು ಉಪಯೋಗಿಸಲಾಗುತ್ತದೆ.

ಜನರು ಸರಾಸರಿ ಉಪಯೋಗಿಸುವ ಹಾಲಿನ ಪರಿಮಾಣಕ್ಕೂ ಸರಾಸರಿ ಆಯುರ್ದಾಯಕ್ಕೂ ಏನೋ ಸಂಬಂಧವಿರುವಂತೆ ತೋರುತ್ತದೆ. ಕಡಿಮೆ ಹಾಲು ಉಪಯೋಗಿಸುವ ಭಾರತೀಯನ ಸರಾಸರಿ ಆಯುಷ್ಯ ೨೭ ವರ್ಷವಾದರೆ ಸರಾಸರಿ ೫೬ ಔಂಸ್ ಹಾಲು ಬಳಸುವ ನ್ಯೂಝಿಲಂಡಿನ ಪ್ರಜೆಯ ಆಯುರ್ದಾಯ ೭೦ ವರ್ಷವಾಗಿದೆ.

ಭಾರತದಲ್ಲಿ ಸಾಯುವಷ್ಟು ಶಿಶುಗಳು ಬಹುಶಃ ಬೇರೆಲ್ಲೂ ಸಾಯುವೆಂದು ತೋರುತ್ತದೆ. ಹಾಲಿನ ಬಳಕೆಗೂ ಆಯುರ್ದಾಯಕ್ಕೂ ಇರುವ ಸಂಬಂಧದಂಥದೇ ಇಲ್ಲಿಯೂ ಇರುವಂತೆ ತೋರುತ್ತದೆ. ಪಶುವೈದ್ಯನಿಗೆ ಇಲ್ಲಿದೆ ಸ್ಥಾನ: ಏಕೆಂದರೆ ಅವನೊಬ್ಬನೇ ನಮ್ಮ ಪ್ರಜೆಗೆ ಆರೋಗ್ಯಶಾಯನಾಗಿಯೂ ಬುದ್ಧಿಶಾಲಿಯಾಗಿಯೂ ಬೆಳೆಯಲು ನೆರವಾಗಬಲ್ಲನು.

ಭಾರತದ ಕುರಿಯೂ ಕೀಳ್ತರದ್ದು. ಅದರ ಸರಾಸರಿ ತೂಕ ೬೦ ಪೌಂಡೂ ಇಲ್ಲ. ಸರಾಸರಿ ಉಣ್ಣೆಯ ಹುಟ್ಟು ಸುಮಾರು ಎರಡು ಪೌಂಡು. ಇದೂ ತೀರ ಕಡಿಮೆಯೆ. ಇದರೊಡನೆ ಹೋಲಿಸಿದರೆ, ಯುರೋಪಿನ ಕುರಿಗಳು ಉತ್ತಮ ದರ್ಜೆಯವು. ಅವುಗಳ ಸರಾಸರಿ ಜೀವಂತ ತೂಕವೂ ಉಣ್ಣೆಯ ಹುಟ್ಟುವಳಿಯೂ ಭಾರತದ ಕುರಿಗಿಂತ ಮುಪ್ಪಟ್ಟು ಹೆಚ್ಚಾಗಿವೆ. ಜಗತ್ತಿನಲ್ಲಿರುವ ಕುರಿಗಳಲ್ಲಿ ನೂರಕ್ಕೆ ೬ ಭಾರತದಲ್ಲಿವೆ. ಆದರೆ ಅದು ಕೊಡುವ ಉಣ್ಣೆ ಜಗತ್ತಿನಲ್ಲಿ ನೂರಕ್ಕೆ ಎರಡಂಶದಷ್ಟು ಮಾತ್ರ. ಅರ್ಥಾತ್ ಇಲ್ಲಿರುವ ಕುರಿಗಳ ಸಂಖ್ಯೆಯ ಮೇಲೆ ಮೂರು ಪಾಲು ಕಡಿಮೆ ಉಣ್ಣೆ ಉತ್ಪನ್ನವಾಗುತ್ತದೆ. ಇಲ್ಲಿಯೂ ಪಶುವೈದ್ಯನಿಗೆ ಕೆಲಸವಿದೆ. ಅವರು ಈ ಪ್ರಾಣಿಗಳನ್ನು ಇತರ ಮುಂದುವರಿದ ದೇಶಗಳಲ್ಲಿರುವವುಗಳಷ್ಟೇ ಸುಧಾರಿಸಿ ಹೆಚ್ಚು ಉತ್ತಮ ಉಣ್ಣೆಬಟ್ಟೆಗಳನ್ನೂ ಹೆಚ್ಚು ಮಾಂಸವನ್ನೂ ಒದಗಿಸಬಲ್ಲನು.

ಆಡು ಮತ್ತು ಕೋಳಿಗಳ ಸಂಗತಿಯೂ ಅಷ್ಟೇ. ಅವುಗಳನ್ನೂ ಸುಧಾರಿಸಬೇಕಾಗಿದೆ. ಅವುಗಳನ್ನು ಸುಧಾರಿಸಿ ಪಶುವೈದ್ಯರು ಹಾಲು ಮತ್ತು ಮೊಟ್ಟೆಗಳನ್ನು ಎಲ್ಲರ ಕೈಯಳವಿಗೆ ತರಬಲ್ಲರು.

ಪ್ರಾಣಿಗಳಿಗೆ ಬರುವ ಕೆಲ ದೊಡ್ಡ ಸೋಂಕು ರೋಗಗಳಿಂದಾಗುವ ಹಾನಿಯನ್ನು ಇನ್ನು ವಿಚಾರಿಸೋಣ.

ದನಕರುಗಳಿಗೆ ಅಂಟುವ ಮೂರು ಮುಖ್ಯ ಪಿಡುಗುಗಳಿವೆ. ಅತಿಸಾರ (ರಿಂಡರ್‌ಪೆಸ್ಟ್), ಗುಂಡಿಗೆ ಸೆಲೆ (ಎಚ್. ಎಸ್. [ಒಂದುಬಗೆಯ ಹೃದಯ ವಿಕಾರ]) ಮತ್ತು ಕಾಲು ಬೇನೆ ಬಾಯಿ ಬೇನೆ. ಇವು ಭಾರತಕ್ಕೆ ಅಪಾರ ಹಾನಿಯನ್ನುಂಟುಮಾಡುತ್ತವೆ. ೧೯೩೬–೩೭ರಲ್ಲಿ ಈ ಬೇನೆಗಳಿಂದ ಆದ ಪಶುಮರಣಗಳ ಸಂಖ್ಯೆಗಳುಇಂತಿವೆ: ಅತಿಸಾರದಿಂದ ೨೦೩೨೦೦, ಗುಂಡಿಗೆಸೆಲೆಯಿಂದ ೩೬೪೦೦, ಕಾಲುಬೇನೆ ಬಾಯಿಬೇನೆಯಿಂದ ೧೩೬೦೦. ನಿಜವಾಗಿ ಈ ಸಂಖ್ಯೆಗಳು ಸತ್ಯ ಸಂಖ್ಯೆಗಳಿಗಿಂತ ಎಷ್ಟೋ ಕಡಿಮೆಯಾಗಿವೆ. ದನಕರುಗಳಿಗೆ ಬರುವ ರೋಗಗಳಿಂದಾದ ಪಶುಮರಣಗಳನ್ನು ಅಧಿಕಾರಿಗಳಿಗೆ ತಿಳಿಸಲೇಬೇಕೆಂಬ ಕಾಯಿದೆಯಿದ್ದ ಬ್ರಹ್ಮದೇಶದ ಒಂದು ಭಾಗದ ಸಂಖ್ಯೆಗಳನ್ನು ನೋಡಿದರೆ ಈ ಮಾತು ಮನವರಿಕೆಯಾದಿತು. ಈ ಸಂಖ್ಯೆಗಳನ್ನು ನಂಬಿದರೆ ದನಕರುಗಳ ಸರಾಸರಿ ಆಯುಷ್ಯ ೫೮ ವರ್ಷವೆಂದು ತೋರಿಬರುವಂತಿತ್ತು. ಆದರೆ ಇದು ಶುದ್ಧ ತಪ್ಪು. ದನಕರುಗಳ ಸರಾಸರಿಆಯುಷ್ಯ ೬ ವರ್ಷ. ಮೇಲೆ ಕಂಡುಬಂದ ಆಯುಷ್ಯು ನಿಜ ಆಯುಸ್ಸಿನ ಒಂಭತ್ತರಷ್ಟಾಗುತ್ತದೆ. ಅಂದಮೇಲೆ ನಿಜವಾದ ಪಶುಮರಣದ ಸಂಖ್ಯೆ ಲೆಕ್ಕದಲ್ಲಿ ದಾಖಲಾದ ಸಂಖ್ಯೆಗಿಂತ ಒಂಭತ್ತು ಪಟ್ಟು ಇತ್ತೆಂದು ತಿಳಿದುಕೊಳ್ಳಲಡ್ಡಿಯಿಲ್ಲ. ರೈತನಿಗೆ ಅಪ್ರತ್ಯಕ್ಷವಾಗಿ ಇದಕ್ಕಿಂತಲೂ ಹೆಚ್ಚು ಹಾನಿಯಾಗಿರಬೇಕು. ಉದಾಹರಣೆಗಾಗಿ ಕಾಲುಬೇನೆ ಬಾಯಿಬೇನೆಯಿಂದ ಒಂದು ದನ ಸತ್ತರೆ ೯೯ ದನಗಳು ತಾತ್ಕಾಲಿಕವಾಗಿ ನಿರುಪಯುಕ್ತವಾಗಬಹುದು. ಈ ಮೂಲಕ ಸಾಗುವಳಿ ಕೆಲಸ ಸರಿಯಾಗದೆಯೂ ಹಾಲು ಕರೆಯುವದು ಕಡಿಮೆಯಾಗಿಯೂ ಅವನಿಗೆ ನಷ್ಟವಾಗುತ್ತದೆ. ಇನ್ನೂ ಹಲವಾರು ಜ್ಞಾತಾಜ್ಞಾತ ಕ್ಷಯ ಮತ್ತು ಜೀವಾಣು ಮೂಲ ರೋಗಗಳಿದ್ದು ಅವುಗಳಿಂದೊದಗುವ ಹಾನಿಯೂ ದೊಡ್ಡದೇ ಆಗಿರುತ್ತದೆ. ದನಗಳ ಮೈಯನ್ನು ಕಚ್ಚಿ ಗುಳ್ಳೆಯೆಬ್ಬಿಸುವ ಒಂದು ಜಾತಿಯ ನೊಣಗಳ ಪೀಡೆಯಿಂದ ವರ್ಷಕ್ಕೆ ಒಂದೂವರೆ ಕೋಟಿ ರೂಪಾಯಿ ನಷ್ಟವಾಗುತ್ತದೆಂದು ಅತಿಶಯೋಕ್ತಿಯಿಲ್ಲದೆ ಹೇಳಬಹುದು. ಯುರೋಪಿನಲ್ಲಿ ಈ ರೋಗಗಳನ್ನು ಪೂರ್ತಿಯಾಗಿಯೆ ಉಚ್ಚಾಟನೆ ಮಾಡಿದಂತಿದ್ದು ಅಲ್ಲಿ ಇವುಗಳಿಂದಾಗುವ ಹಾನಿ ತೀರ ಅಲ್ಪ. ಇತರರು ಸಾಧಿಸಿದ್ದನ್ನು ನಾವೂ ಸಾಧಿಸಲಾರೆವೆಂದು ನಂಬಲು ಕಾರಣವೇನೂ ಇಲ್ಲ. ಹೀಗೆ ಪಶುವೈದ್ಯನು ಮಾತ್ರ ರೋಗಗಳನ್ನು ದೂರ ಮಾಡುವದೇ ಮೊದಲಾದ ಕಾರ್ಯಗಳಿಂದ ದೇಶದ ಹಾನಿಯನ್ನು ತಪ್ಪಿಸಬಲ್ಲನೆಂದು ಸ್ಪಷ್ಟವಾಗುತ್ತದೆ.

ಪಶುಗಳಿಂದ ಕ್ಷಯವೇ ಮೊದಲಾದ ಅನೇಕ ರೋಗಗಳು ಮನುಷ್ಯನಿಗೂ ದಾಟುತ್ತವೆ. ವಾಂತಿಭೇದಿ ಮೊದಲಾದ ಹಲವಾರು ರೋಗಗಳು ಹಾಲಿನ ಮೂಲಕ ಒಬ್ಬ ಮನುಷ್ಯನಿಂದ ಇನ್ನೊಬ್ಬನಿಗೆ ದಾಟುವದುಂಟು. ಪಶುವೈದ್ಯರು ಪಶುಗಳ ರೋಗಗಳನ್ನು ನಿವಾರಿಸುವ ಮತ್ತು ಗುಣಪಡಿಸುವ ಮೂಲಕ ಪರಿಶುದ್ಧವಾದ ಹಾಲನ್ನೊದಗಿಸಿ ಮನುಷ್ಯರಲ್ಲಿಯೂ ಈ ರೋಗಗಳ ಬಾಧೆಯನ್ನು ಕಡಿಮೆ ಮಾಡಬಲ್ಲರು.

ಮೇಲೆ ಹೇಳಿದ ಸಂಗತಿಗಳಿಂದ ಭಾರತಕ್ಕೆ ಪಶು ವೈದ್ಯರ ಮಹತ್ವವೆಷ್ಟಿದೆಯೆಂದು ಯಾವನೇ ನಿಷ್ಪಕ್ಷಪಾತಿಗೆ ಮನವರಿಕೆಯಾಗದಿರದು. ವಸ್ತುತಃ ಭಾರತದ ಸಮೃದ್ಧಿಯ ಕೀಲಿಕೈಯೇ ಪಶುವೈದ್ಯರ ಕೈಯಲ್ಲಿದೆಯೆನ್ನಬಹುದು.

ಹೀಗಿದ್ದರೂ ಎಲ್ಲೆಲ್ಲಿಯೂ ಪಶುವೈದ್ಯರನ್ನು ಕಡೆಗಣಿಸುವದೇ ಕಾಣಬರುತ್ತಿದೆ. ಅವರ ಕಡೆ ಯೋಗ್ಯ ಲಕ್ಷ್ಯವನ್ನು ಕೊಡುವವರಿಲ್ಲ. ಬಹುತರವಾಗಿ ಜನರು ಅವರನ್ನು ಕೀಳಾಗಿ ಕಾಣುತ್ತಾರೆ. ಇದೆಲ್ಲ ಅವರ ಯೋಗ್ಯತೆಯನ್ನು ಅರಿಯದ ಜನರ ಅಜ್ಞಾನದ ಪರಿಣಾಮ. ಕೆಲ ಪಶುವೈದ್ಯರು ಕೂಡ ತಮ್ಮ ವೃತ್ತಿ ತುಚ್ಛವೆಂದು ತಿಳಿಯುವದುಂಟು. ಈ ವೃತ್ತಿಗೆ ಸೇರಿದ್ದೇ ತಮ್ಮ ದುರದೃಷ್ಟವೆಂದು ಅವರು ಬಗೆಯುತ್ತಾರೆ. ಆದರೆ ಪಶುವೈದ್ಯಕವು ಆರ್ಥಿಕ ದೃಷ್ಟಿಯಲ್ಲಿ ಅತ್ಯಂತ ಪ್ರಯೋಜನಕಾರಿಯೂ ವಿಜ್ಞಾನ ದೃಷ್ಟಿಯಿಂದ ತುಂಬ ಅರ್ಥವತ್ತಾಗಿಯೂ ಇದೆ. ಆದರೂ ಪಶುವೈದ್ಯರಿಗೆ ಸರಕಾರ ಸರಿಯಾದ ಸಂಬಳ ಕೊಡುತ್ತಿಲ್ಲ.

ಆಗಿ ಹೋದುದಕ್ಕೆ ಕೂಗಿ ಫಲವಿಲ್ಲ. ಭವಿಷ್ಯತ್ತಿನ ಕಡೆ ಆಶಾದೃಷ್ಟಿಯನ್ನಿಡೋಣ. ಏಕೆಂದರೆ ಈಗ ಪ್ರಾಮಾಣಿಕ ಜನರು ನಮ್ಮ ರಾಷ್ಟ್ರದ ಸೂತ್ರಧಾರರಾಗಿದ್ದಾರೆ. ಅವರು ಇತ್ತ ಲಕ್ಷ ಕೊಟ್ಟೇ ಕೊಡುವರು. ಈ ವರೆಗೆ ಅತ್ಯಂತ ಮಹತ್ವದ ಕೆಲಸಗಳೇ ಅತ್ಯಂತ ದುರ್ಲಕ್ಷ್ಯಕ್ಕೊಳಗಾಗಿದ್ದವು. ಆದುದರಿಂದ ಪಶುವೈದ್ಯರು ಎಲ್ಲರಿಗಿಂತ ದುರ್ಲಕ್ಷಿತರಾಗಿದ್ದರು. ಇಂದು ಅವರು ಎಷ್ಟು ತಿರಸ್ಕೃತರಾಗಿದ್ದಾರೆಂದರೆ ಕೆಲವೇಳೆ ಅವರು ತಮ್ಮ ವೃತ್ತಿಯನ್ನು ಪ್ರಕಾಶಪಡಿಸಲು ಕೂಡ ಹಿಂಜರಿಯುತ್ತಾರೆ.

ಮೇಲೆ ಹೇಳಿದ್ದರ ಮೇಲೆ ಪಶುವೈದ್ಯರು ಅತ್ಯಂತ ಮಹತ್ವದ ಸಮಸ್ಯೆಯನ್ನೆದುರಿಸಬೇಕಾಗಿದೆಯೆಂದು ಓದುಗರಿಗೆ ಮನದಟ್ಟಾಗಬಹುದು. ಅವಾವುವೆಂದರೆ

(೧) ಹಾಲಿನ ಮತ್ತು ತಜ್ಜನ್ಯ ಪದಾರ್ಥಗಳ ಉತ್ಪತ್ತಿ.

(೨) ದನಕರುಗಳ ತಳಿ ಸುಧಾರಣೆ ಮತ್ತು ಕೃಷಿ ಕಾರ್ಯಕ್ಕಾಗಿ ಒಳ್ಳೆ ಎತ್ತುಗಳ ಪೂರೈಕೆ.

(೩) ಕುರಿ ಆಡುಗಳ ಸುಧಾರಣೆಯ ಮೂಲಕ ಮಾಂಸದ ಪೂರೈಕೆ.

(೪) ಕುರಿಗಳ ಸುಧಾರಣೆಯ ಮೂಲಕ ಉಣ್ಣೆಯ ಪೂರೈಕೆ.

(೫) ಕೋಳಿಗಳ ಸುಧಾರಣೆಯ ಮೂಲಕ ತತ್ತಿಗಳ ಪೂರೈಕೆ.

(೬) ದನಕರುಗಳ ಸಾಂಕ್ರಾಮಿಕ ಮತ್ತು ಇತರ ರೋಗಗಳನ್ನು ಹಿಡಿತಕ್ಕೆ ತರುವದು.

(೭) ಮನುಷ್ಯನಿಗೂ ಪಶುಗಳಿಗೂ ಸಾಮಾನ್ಯವಾದ ರೋಗಗಳ ನಿವಾರಣೆ.

(೮) ಹಾಲಿನ ಮೂಲಕ ಹಬ್ಬುವ ರೋಗಗಳ ನಿವಾರಣೆ.

(೯) ರುಗ್ಣಪಶುಗಳ ಶುಶ್ರೂಷೆ.

ಇದಲ್ಲದೆ ಗೋಮಾಂಸ ಮತ್ತು ಹಂದಿಯ ಮಾಂಸಗಳನ್ನು ಅವುಗಳ ರೂಢಿಯುಳ್ಳವರಿಗೆ ಒದಗಿಸುವ ಕೆಲಸವೂ ಪಶುವೈದ್ಯರ ಪಾಲಿಗೆ ಬರುತ್ತದೆ.

ಇವು ರಾಷ್ಟ್ರಕ್ಕೆ ಮಹತ್ವದ ಸಮಸ್ಯೆಗಳು. ನಮ್ಮ ದೇಶ ಮುಂದುವರಿಯಬೇಕಾದರೆ, ಮತ್ತು ಅದರ ಪ್ರಗತಿ ತೀವ್ರವಾಗಬೇಕಾದರೆ, ಅತ್ಯಂತ ಸಮರ್ಥರೂ ಕಾರ್ಯಕ್ಷಮರೂ ಆದ ಜನರನ್ನುಪಶುವೈದ್ಯವೃತ್ತಿಯತ್ತ ಒಲಿಸಬೇಕಾಗಿದೆ. ಆದರೆ ದುರ್ದೈವದಿಂದ ಬೇರೆ ಯಾವಲ್ಲಿಯೂ ಎಡೆದೊರೆಯದವರು ಇದನ್ನು ಆಶ್ರಯಿಸುತ್ತಾರೆ. ಸಮರ್ಥರೂ ಕರ್ತೃತ್ವಶಾಲಿಗಳೂ ಆದವರನ್ನು ಇತ್ತ ಆಕರ್ಷಿಸಲು ಪಶುವೈದ್ಯರ ಅಂತಸ್ತನ್ನು ಏರಿಸಬೇಕು. ರಾಷ್ಟ್ರದ ನಾಯಕರೂ ವಿವಿಧ ಗೋಸೇವಾ ಕಾರ್ಯಕರ್ತರೂ ಈ ವಿಷಯವನ್ನು ಆಸ್ಥೆಯಿಂದ ವಿಚಾರಿಸುವರೆಂದು ಹಾರೈಸುತ್ತೇನೆ.

—ಜಿ. ಕರ್ಜೇಲ ಸಿಂಗ

---

❋ ಮಣ್ಣು, ರಸ್ತೆ ಹಾಗು ಕಟ್ಟಡ ದ್ರವ್ಯಗಳ ಸಂಶೋಧನೆಯ ಪ್ರಯೋಗಶಾಲೆಯೊಂದು ಸಂಯುಕ್ತ ಪ್ರಾಂತದ ಲೋಕೋಪಯೋಗಿ ಶಾಖೆಯವರಿಂದ ಪ್ರಾರಂಭಿಸಲ್ಪಡಲಿದೆ. ಇದಕ್ಕಾಗಿ ಬೇಕಾಗುವ ೧ ಲಕ್ಷ ೩೦ ಸಾವಿರ ರೂ. ಬೆಲೆಯ ಯಂತ್ರ ಸಾಮಗ್ರಿಯು ಅಮೇರಿಕೆಯಿಂದ ಸದ್ಯದಲ್ಲೆ ಬರಲಿದೆ.

ಮಣ್ಣನ್ನು ಮಳೆ ಮತ್ತು ಬಿಸಿಲುಗಳಿಂದ ಕೆಡದಿರುವಂತೆ ನೋಡಿಕೊಂಡು ಕಚ್ಚಾ ರಸ್ತೆಗಳನ್ನು ಒಳ್ಳೆಯ ಸ್ಥಿತಿಯಲ್ಲಿಡುವ ಹಾಗು ಮಣ್ಣಿನ ಮನೆಗಳನ್ನು ಮಳೆಗಾಲದಲ್ಲಿ ರಕ್ಷಿಸಿಕೊಳ್ಳುವ ವಿಚಾರದಲ್ಲಿ ಲೋಕೋಪಯೋಗಿ ಶಾಖೆಯ ಸಂಶೋಧನಾ ಶಾಖೆಯು ಶೋಧವನ್ನು ನಡೆಸಿದ್ದು ಯಶಸ್ಸನ್ನು ಪಡೆಯುವ ಲಕ್ಷಣಗಳಿವೆಯೆಂದು ಸಂಶೋಧನಾ ಇಂಜಿನಿಯರರು ಹೇಳಿದ್ದಾರೆ.

---

## ವ್ಯಾಪಾರಲೋಕ

### ಮುಂಬಯಿ ಶೇರಪೇಟೆ

| | ತಾ. ೧೬ |
|---|---|
| ಮುಂಬಯಿ ಡಾಯಿಂಗ್ | ೯೪೬–೪–೦ |
| ಕೋಹಿನೂರು | ೨೫೫–೦–೦ |
| ಸ್ವದೇಶಿ | ೨೭೯–೮–೦ |
| ಗೋಕಾಕ | ೨೫೧–೦–೦ |
| ಸೆಂಚುರಿ | ೨೫೦–೦–೦ |
| ಸಿಂಪ್ಲೆಕ್ಸ | ೧೬೭–೮–೦ |
| ಟಾಟಾ ಸ್ಟೀಲ ಡೆಫರ್ಡ | ೧೨೮೨–೮–೦ |
| ಇಂಡಿಯನ್ ಅಯರ್ನ್ | ೨೦–೭–೦ |
| ಅಸೋ. ಸಿಮೆಂಟ್ಸ | ೧೩೧–೮–೦ |
| ಸೆಂಟ್ರಲ ಬ್ಯಾಂಕ್ | ೮೧–೮–೦ |
| ಇಂಪೀರಿಯಲ್‌ಬ್ಯಾಂಕ್(ಪೂರ್ಣ) | ೧೭೯೭–೮–೦ |

### ಚಿನ್ನ ಬೆಳ್ಳಿ

| | |
|---|---|
| ತಯಾರಿ ಚಿನ್ನ | ೧೧೮–೦–೦ |
| ವಾಯದಾ ,, | ೧೧೬–೮–೦ |
| ತಯಾರಿ ಬೆಳ್ಳಿ | ೧೮೭–೪–೦ |
| ವಾಯದಾ ,, | ೧೮೪–೧೨–೦ |
| ಸಾವರಿನ | ೭೫–೦–೦ |

### ಅರಳೆ

ಅನಧಿಕೃತ ದರಗಳು ಇಂತಿವೆ.

| | |
|---|---|
| ಜುಲೈ | ೬೨೫–೧೨–೦ |
| ಸೆಪ್ಟೆಂಬರ | ೬೨೪–೦–೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೯೦–೪–೦ |
| ಅಗಸೆ (ತಯಾರಿ) | ೨೯-೧೪-೦ |
| ,, ಹೊಸ | ೨೯-೧೨-೦ |
| ಅಗಸೆ ಎಣ್ಣೆ | ೧೭-೦-೦ |
| ಔಡಲ | ೨೬-೦-೦ |

### ಹುಬ್ಬಳ್ಳಿ

( ಅ. ಪ್ರೊ. ಮಾರ್ಕೆಟ ಕಮಿಟಿ ಹುಬ್ಬಳ್ಳಿ )

| | ತಾ. ೧೬ |
|---|---|
| ಜ. ಹೊಸ ಹತ್ತಿ (ನಗಕ್ಕೆ) | ೪೨೫–೪೬೦ |
| ಅಪ್ಲಂಡ ಹತ್ತಿ ,, | ವ್ಯಾಪಾರ ನಡೆದಿರುವದಿಲ್ಲ |
| ಜೀನ್ ಅರಳಿ | ೨೮೦–೩೦೫ |
| ಡಬಲ್ ರೋಲ್ ಅರಳಿ | ವ್ಯಾಪಾರ ನಡೆದಿಲ್ಲ. |
| ಕುಸುಬಿ (ಬ. ಮಣಕ್ಕೆ) ೧೪–೧೩ | ೦ ೧೫–೦–೦ |
| ಅಗಸಿ (ಚೀಲಕ್ಕೆ) | ೪೦–೪೨ |
| ಔಡಲ ,, | ೩೬–೩೭ |
| ಜ. ಹೆಸರು ,, | ೪೬–೪೮ |
| ಕರಿ ಎಳ್ಳು ,, | ೬೪ |
| ಬಿಳಿ ಎಳ್ಳು ,, | ೮೦–೯೩ |
| ಕಡಲೆ ,, | ೫೫ |
| ಜ. ತೊಗರಿ ,, | ೨೮–೩೦ |
| ಹುರಳಿ ,, | ೩೫–೩೬ |
| ಕೆಂ. ಅಲಸಂದಿ ,, | ೫೫ |
| ಬಿ. ಅಲಸಂದಿ ,, | ೬೪ |
| ಶೇಂಗಾ (ಹೇರು) | ೫೦–೫೫ |
| ಶೇಂಗಾ ಕಾಳು | ೮೦—೮೮ |

### ಸಾಂಗಲಿ ಪೇಟೆ

| | |
|---|---|
| ಅರಿಸಿಣ(ಹೇರು) | ೯೦-೧೦೭ |
| ಮೆಣಸಿನಕಾಯಿ(ಹೇರು) | ೧೫೦-೨೦೦ |
| ಶೇಂಗಾ(ಖಂಡಿ) | ೧೪೭–೪೦ |
| ಬೆಲ್ಲ(ಹೇರು) | ೫೦-೬೮ |

---

## ಮರಣದಂಡನೆಯನ್ನು ತೆಗೆದು ಹಾಕುವುದು

ಘಟನಾಸಮಿತಿಯಲ್ಲಿ ಡಾ. ಅಂಬೇಡಕರರು ವ್ಯಕ್ತಪಡಿಸಿದ ಈ ಕೆಳಗಿನ ಅಭಿಪ್ರಾಯನ್ನು ಸಾಮಾನ್ಯವಾಗಿ ಭಾರತೀಯರು ಎಲ್ಲೆಲ್ಲೂ ಪ್ರಶಂಸಿಸದಿರರು. ಕರಾಚಿಯ ಕಾಂಗ್ರೆಸ್ಸಿನ ಸುಪ್ರಸಿದ್ಧ ಠರಾವಿನ ಮೇಲೆಯೇ ಅದು ನಿಂತಿದೆ. ಅದಕ್ಕೆ ಘಟನೆಯಲ್ಲಿ ಸ್ಥಳಕೊಟ್ಟು ಸಮಿತಿಯು ದೇಶದ ಪ್ರತ್ಯಾಶೆಯನ್ನು ಪೂರೈಸುವುದೆಂದು ನಂಬಬಹುದಾಗಿದೆ. ಆ ವಿಷಯವನ್ನು ಶಾಸನಸಭೆಗೆ ಬಿಟ್ಟುಕೊಡಬಾರದು.

"ಈ ದೇಶವು ಅದ್ಯಂತವಾಗಿ ಅಹಿಂಸಾತತ್ವವನ್ನು ನಂಬುತ್ತದೆ. ಅದು ಅದರ ಪ್ರಾಚೀನ ಪರಂಪರೆ. ಕೆಲವರು ಅದನ್ನು ವ್ಯವಹಾರದಲ್ಲಿ ಆಚರಿಸದಿರಬಹುದು. ಆದರೆ ಎಲ್ಲರೂ ಖಂಡಿತವಾಗಿ ಅಹಿಂಸಾತತ್ವಕ್ಕೆ ಅಂಟಿಕೊಂಡಿದ್ದಾರೆ. ಆದುದರಿಂದ ಮರಣದಂಡನೆಯನ್ನು ನಿಃಶೇಷವಾಗಿ ತೆಗೆದುಹಾಕುವುದು ಈ ದೇಶಕ್ಕೆ ಯೋಗ್ಯವಾದುದು."

ಕಿ. ಘ. ಮ.

ವರ್ಧಾ

೭-೭-೪೯

Reg. No. B. 3148

LICENCE No. 3
Licenced to Post without Prepayment

KARMAVEER 20-6-49

## ಕರ್ನಾಟಕದಲ್ಲಿ

### ಧಾರವಾಡ

ಕಳೆದವಾರ ವರದಿ ಮಾಡಿದಂತೆ ಹುಬ್ಬಳ್ಳಿಯ ಮಿತ್ರಸಮಾಜದಲ್ಲಿ ವಜ್ರವೈಡೂರ್ಯಗಳ ಪೆಟ್ಟಿಗೆಯನ್ನು ತೆಗೆದುಕೊಂಡು ಫರಾರಿಯಾಗಿದ್ದ ಕಳ್ಳನನ್ನು ಹುಬ್ಬಳ್ಳಿಯ ಪೋಲೀಸರು ಕೊಲ್ಹಾಪುರದಲ್ಲಿ ಸೆರೆಹಿಡಿದು ಹುಬ್ಬಳ್ಳಿಗೆ ತಂದಿರುವರು. ಇವನ ಹೆಸರು ನಾಗರಾಜ ರೆಡ್ಡಿಯೆಂದೂ ಇವನಿಗೆ ನಾಲ್ಕೈದುಸಲ ಶಿಕ್ಷೆಯಾಗಿದೆಯೆಂದೂ ತಿಳಿಯುತ್ತದೆ. ಕೊಲ್ಹಾಪುರದಲ್ಲಿ ಪೋಲೀಸರು ಅವನನ್ನು ಬಂಧಿಸಿದ ಕೂಡಲೆ ಕೈಯಲ್ಲಿದ್ದ ವಜ್ರದ ಉಂಗುರವನ್ನು ನುಂಗಿದನೆಂದೂ ಕ್ಷ ಕಿರಣದ ಸಹಾಯದಿಂದ ಅದು ಅವನ ಹೊಟ್ಟೆಯಲ್ಲಿದ್ದುದನ್ನು ಕಂಡು ಹಿಡಿದು ತೀಕ್ಷ್ಣರೇಚಕಕೊಟ್ಟು ಅದನ್ನು ಹೊರಗೆ ತೆಗೆಯಲಾಯಿತೆಂದೂ ತಿಳಿಯುತ್ತದೆ. ಹೆಚ್ಚಿನ ತಪಾಸಣೆಗಾಗಿ ಅವನನ್ನು ನಗರ ಪೋಲೀಸರ ವಶದಲ್ಲಿ ಇಡಲಾಗಿದೆ.

ಹುಬ್ಬಳ್ಳಿಯ ಪ್ರಸಿದ್ಧ ವ್ಯಾಪಾರಿಗಳಾದ ಶ್ರೀ ಶಿವಲಿಂಗಪ್ಪ ಬೆಂಬಳಗಿಯವರ ಮೇಲೆ ತೂಕ ಅಳತೆಯ ಕಾಯದೆಯನ್ವಯ ಇಲ್ಲಿಯ ರೆಸಿಡೆಂಟ ಮ್ಯಾಜಿಸ್ಟ್ರೇಟರು ವಿಧಿಸಿದ ದಂಡದ ಶಿಕ್ಷೆಯು ಸೆಶನ್ಸಕೋರ್ಟಿನಲ್ಲಿ ರದ್ದಾಗಿ ಅವರ ಹಣವನ್ನು ತಿರುಗಿಕೊಡಬೇಕೆಂದು ತೀರ್ಪು ಕೊಡಲಾಯಿತು.

ಮುಂಬಯಿ ಸರಕಾರದವರು ಗೊತ್ತುಪಡಿಸಿದ ಹೊಸ ಸಂಬಳ ಪ್ರಮಾಣ ಮತ್ತು ತುಟ್ಟಿ ಭತ್ತೆಯನ್ನು ಹುಬ್ಬಳ್ಳಿ ಮುನಸಿಪಾಲಿಟಿಯು ಪ್ರಾಥಮಿಕ ಶಿಕ್ಷಕರಿಗೆ ಕೊಟ್ಟಿಲ್ಲವೆಂದೂ ಈ ವಿಷಯದಲ್ಲಿ ಮುಂಬಯಿ ಸರಕಾರವು ಕೈಹಾಕಿ ಮುನಸಿಪಾಲಿಟಿಯವರಿಂದ ಹಣ ಕೊಡಿಸಬೇಕೆಂದೂ ಪ್ರಾಥಮಿಕ ಶಿಕ್ಷಕ ಸಂಘದವರು ಮುಖ್ಯಮಂತ್ರಿಗಳಿಗೆ ಬಿನ್ನವಿಸುವ ತಂತಿಯನ್ನು ಕಳಿಸಿದ್ದಾರೆ.

ಹುಬ್ಬಳ್ಳಿಯ ಭೂಮರಡ್ಡಿ ಇಂಜನಿಯರಿಂಗ ಕಾಲೇಜಿಗೆ ಮುಂಬಯಿ ವಿಶ್ವವಿದ್ಯಾಲಯದವರು ಈ ವರುಷವೂ ಮನ್ನಣೆಕೊಟ್ಟರು.

ಧಾರವಾಡ ಮುನಸಿಪಾಲಟಿಯ ನೋಕರರಿಗೆಲ್ಲ ಸರಕಾರೀ ದರದಂತೆ ತುಟ್ಟಿಭತ್ತೆಯನ್ನು ಕೊಡಲಾಯಿತೆಂದು ತಿಳಿಯುತ್ತದೆ.

ಕಸಗುಡಿಸುವವರ ಸಂಪು ಮಾತ್ರ ಕಳೆದ ೨೫ ದಿನಗಳಿಂದ ಹಾಗೆಯೇ ನಡೆದಿದೆ.

ಹುಬ್ಬಳ್ಳಿಯ ಕಿಲ್ಲೆಯಲ್ಲಿ ಇರುವ ಗೌಸ ಮಹಮ್ಮದ ಹಕೀಮ ಎಂಬ ೩೫ ವರ್ಷದವನು ರೇಜರದಿಂದ ಹೊಟ್ಟೆ ಮತ್ತು ಕುತ್ತಿಗೆಯನ್ನು ಕೊಯ್ದುಕೊಂಡು ರಕ್ತದ ಮಡುವಿನಲ್ಲಿ ಬಿದ್ದುದು ಕಂಡು ಬಂದದ್ದರಿಂದ ಪೋಲೀಸರು ಪಂಚನಾಮೆ ಮಾಡಿ ಹೆಣವನ್ನು ಆಸ್ಪತ್ರೆಗೆ ಕಳಿಸಿದರು. ಸರಿ ಹೊತ್ತಾದರೂ ಇವನಿದ್ದ ಮನೆಯ ಬಾಗಿಲು ತೆರೆಯದಿದ್ದದರಿಂದ ಪೋಲೀಸರಿಗೆ ಸಂಶಯಬಂದು ಬಾಗಿಲು ಮುರಿದಾಗ ಆತ್ಮಹತ್ಯೆಯ ಪ್ರಕರಣ ಗೊತ್ತಾಯಿತು.

ಮುಂಬಯಿ ಮೇಲ್ಮನೆಯ ಉಪಚುನಾವಣೆಗೆ ನಿಂತಿದ್ದ ಅಮ್ಮಿನಭಾವಿಯ ನೇಮಚಂದ ದೇಸಾಯರು ಹಿಂತೆಗೆದುಕೊಂಡು ತಮ್ಮ ಬೆಂಬಲಿಗರೆಲ್ಲ ಶ್ರೀ ಗುರುರಾವ ದೇಸಾಯರಿಗೇ ಮತ ಹಾಕಬೇಕೆಂದು ಪ್ರಕಟನೆ ಹೊರಡಿಸಿದ್ದಾರೆ. ಆದರೂ ಕಾಯದೆಯಂತೆ ಚುನಾವಣೆ ನಡೆಯಲೆಬೇಕಾದ್ದರಿಂದ ೧೩ ನೇ ತಾರೀಕಿನ ದಿನ ಅದು ನಡೆಯಿತು.

ಹುಬ್ಬಳ್ಳಿಯ ಗಣೇಶಲಾಜಿನ ಒಂದು ಕೋಣೆಯಲ್ಲಿ ಮಲ್ಲಪ್ಪ ಎಂಬ ೩೦ ವರುಷದ ತರುಣ ಪ್ರವಾಸಿಯು ಕುತ್ತಿಗೆಗೆ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದು ಕಂಡು ಬಂದದ್ದರಿಂದ ಪೋಲೀಸರು ರೀತಿ ಪ್ರಕಾರ ಪಂಚನಾಮೆ ಮಾಡಿ ಶವವನ್ನು ಅವರ ಆಪ್ತರ ವಶಕ್ಕೆ ಕೊಟ್ಟರು.

---

ಮೈಸೂರು ಪ್ರಜಾಪ್ರತಿನಿಧಿಯ ಸಭೆಯ ಅಧ್ಯಕ್ಷರಿಗೆ ತಿಂಗಳಿಗೆ ೮೦೦ ರೂ. ಸಂಬಳ ೧೫೦ ರೂ. ವಾಹನ ಭತ್ತೆ ೨೦೦ ರೂ. ಮನೆ ಬಾಡಿಗೆ ಅಥವಾ ಒಂದು ಸುಸಜ್ಜಿತವಾದ ಬಂಗಲೆ ಮತ್ತು ಒಂದು ಸರಕಾರಿ ಮೋಟರ ಒದಗಿಸಬೇಕೆಂದೂ ಇದರಂತೆ ಉಪಾಧ್ಯಕ್ಷರಿಗೆ ೨೫೦ ರೂ. ಸಂಬಳ ವಾಹನ ಮತ್ತು ಇತರ ಭತ್ತೆ ಒದಗಿಸಬೇಕೆಂದೂ ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಮುಖ್ಯಮಂತ್ರಿಗಳು ಮುಂದಿಸಿದ ಗೊತ್ತುವಳಿ ಸರ್ವಾನುಮತದಿಂದ ಸ್ವೀಕೃತವಾಯಿತು.

### ಬೆಳಗಾವಿ

ಮುಂಬಯಿ ಬಟ್ಟೆ ನಿಯಂತ್ರಣ ಆಜ್ಞೆಯನ್ನು ಮೀರಿ ಕಳ್ಳತನದಿಂದ ಬಟ್ಟೆಯನ್ನು ಸಾಗಿಸುತ್ತಿದ್ದಾರೆಂಬ ಅಪಾದನೆಯ ಮೇಲೆ ಮಿರ್ಜಿ ರೇಲ್ವೆ ಪೋಲೀಸರು ಮೂವರನ್ನು ಸೆರೆಹಿಡಿದಿದ್ದಾರೆ. ಹತ್ತುಪೌಂಡಿಗಿಂತ ಎಷ್ಟೋಹೆಚ್ಚು ಪಟ್ಟು ಬಟ್ಟೆಯನ್ನು ಒಯ್ಯುತ್ತಿರುವಾಗ ಪೋಲಿಸರು ಅವರನ್ನು ಬಂಧಿಸಿದರು.

ತಾಳೀಕೋಟೆಯಲ್ಲಿಯ ಪಣ್ಯಬಪ್ಪಾ ಗುರುಪಾದಪ್ಪಾ ಮಳೀಮಠ ಮತ್ತು ಕರಬಸಯ್ಯ ದೊಡ್ಡಬಸಯ್ಯ ನಡವಿನಮನಿ ಎಂಬ ಇಬ್ಬರು ನೋಟುಗಳ ಹಣವನ್ನು ಎರಡುಪಟ್ಟು ಮಾಡುವದಾಗಿ ಹೇಳಿ ಸುಮಾರು ೨೨೦೦ ರೂ. ತೆಗೆದುಕೊಂಡು ಫರಾರಿಯಾದವರನ್ನು ಬೆಳಗಾವಿಯಲ್ಲಿ ಗಡಿಯಾರ ಮಾರುತಿರುವಾಗ ಸೆರೆಹಿಡಿಯಲಾಯಿತು. ಅವರ ಹತ್ತರ ೧೭೮೫ ರೂ ದೊರೆತವು.

ಶಹಾಪುರದಲ್ಲಿಯ ಮಂಚಯ್ಯ ಸಿದ್ದಯ್ಯ ಹಿರೇಮಠ ಎನ್ನುವವನು ವಿಷ ತಿಂದು ಆತ್ಮಹತ್ಯೆಯ ಪ್ರಯತ್ನ ಮಾಡಿದನು. ಅವನನ್ನು ಆಸ್ಪತ್ರೆಯಲ್ಲಿ ಉಪಚರಿಸಲಾಗಿ ಜೀವದಿಂದ ಉಳಿದನು. ಬಡತನದ ಬವಣೆಯನ್ನು ತಾಳಲಾರದೆ ಇವನು ಆತ್ಮಹತ್ಯೆಯ ಪ್ರಯತ್ನ ಮಾಡಿದನೆಂದು ಹೇಳಲಾಗುತ್ತದೆ.

ಮುರಲೀಧರ ಶಿವರಾಮ ಕಲವೇಸರ ಇವನು ವಿಷತಿಂದು ಆತ್ಮಹತ್ಯೆ ಮಾಡಿಕೊಂಡನು.

ಚಿಕ್ಕೋಡಿಯ ಅಕ್ಕನ ಬಳಗದಲ್ಲಿ ೧೦ ನೇ ತಾರೀಕಿನ ದಿವಸ ಶ್ರೀ ಚರಮೂರ್ತಿಸ್ವಾಮಿಗಳ ಮಠದಲ್ಲಿ ಶ್ರೀ ವಿ. ಕೆ. ಕರಡಿಯವರ ಹಸ್ತದಿಂದ 'ಹೊಲಿಗೆಯ ವರ್ಗದ ಉದ್ಘಾಟನ ಸಮಾರಂಭ ಜರುಗಿತು.

ದೇಶೀ ವೈದ್ಯಕ ಬೋರ್ಡಿನ ಚುನಾವಣೆಯ ಪದ್ಧತಿಯು ಪ್ರಜಾಪ್ರಭುತ್ವತತ್ವಕ್ಕೆ ವಿರುದ್ಧವಾಗಿರುವದರಿಂದ ಮತ್ತು ಕರ್ನಾಟಕದ ವಿಷಯಕ್ಕೆ ಈ ವರೆಗೆ ಸರಕಾರವು ಮಾಡಿದ ವಿಷಯವನ್ನು ವಿಮರ್ಶಿಸಿ ಸರಕಾರದ ವೈದ್ಯಕದ ಪ್ರತಿಯೊಂದು ಕಾರ್ಯಕ್ರಮದಲ್ಲಿ ಭಾಗವಹಿಸದೆ ಈಗ ಬಂದಿರುವ ಚುನಾವಣೆಗಳನ್ನು ಸಹ ಬಹಿಷ್ಕರಿಬೇಕೆಂಬ ಅಭಿಪ್ರಾಯ ನಿಖಿಲ ಕರ್ನಾಟಕ ಆಯುರ್ವೇದ ಮಂಡಲದ ಬೆಳಗಾವಿಯ ಸಭೆಯಲ್ಲಿ ಸದಸ್ಯರಿಂದ ವ್ಯಕ್ತಮಾಡಲಾಯಿತು. ಆದರೆ ಇತರ ಪ್ರಾಂತದವರು ತಮ್ಮ ಪ್ರತಿನಿಧಿಗಳನ್ನು ಆರಿಸಿಕೊಟ್ಟು ಹೋರಾಟಕ್ಕೆ ಅನುವು ಮಾಡಿಕೊಡುತಿರುವದಕ್ಕೆ ಸಹಕಾರ ನೀಡಬೇಕೆಂದು ಗೊತ್ತಾಗಿ ಚುನಾವಣೆ ಮಂಡಲ ಮೊದಲಾದವುಗಳನ್ನು ಏರ್ಪಡಿಸಲಾಯಿತು.

### ಉತ್ತರ ಕನ್ನಡ

ಪ್ರಾದೇಶಿಕ ವಿದ್ಯಾಸಮಿತಿಯವರು ಶಿದ್ದಾಪುರ ತಾಲೂಕಿನಲ್ಲಿ ೫೦ ಶಿಶುವಿಹಾರ ಕೇಂದ್ರಗಳನ್ನು ತೆಗೆಯಬೇಕೆಂದು ಯೋಜಿಸಿದ್ದು ಇದಕ್ಕಾಗಿ ಮಲವಳ್ಳಿ ರಾಮಚಂದ್ರ ಹೆಗಡೆಯವರು ಜೋಗದ ಸಮೀಪವಿರುವ ತಮ್ಮ ೧೦ ಎಕರೆ ಯಾಲಕ್ಕಿ ತೋಟದ ಭೂಮಿಯನ್ನು ದಾನ ಕೊಡಲೊಪ್ಪಿದ್ದಾರೆ.

ಕಳೆದ ತಿಂಗಳು ೯ ನೇ ತಾರೀಕಿಗೆ ಅಜಾದ್ವೀಪದಿಂದ ದೋಣಿಯಲ್ಲಿಸರಾಯ ಒಯ್ಯುತ್ತಿದ್ದಾಗ ಸೆರೆಹಿಡಿಯಲ್ಪಟ್ಟ ನಾಲ್ವರಿಗೆ ಐದೈದು ತಿಂಗಳು ಶಿಕ್ಷೆ ವಿಧಿಸಲಾಯಿತು. ದೋಣಿಯನ್ನು ಸರಕಾರ ಜಪ್ತಮಾಡಲಾಗಿದೆ. ಅದರ ಬೆಲೆ ೬೦೦ ರೂಪಾಯಿಯಿದೆ. ಜಪ್ತಾದ ಸರಾಯಿಯ ಬೆಲೆ ೨೦೦೦ ರೂ. ಆಗುವದು.

ಸರ್ವೋದಯ ಯೋಜನೆಯನ್ನು ಮುಂಡಗೋಡ ತಾಲೂಕಿನಲ್ಲಿ ಪ್ರಾರಂಭಿಸಬೇಕೆಂದು ಗೊತ್ತಾಗಿದ್ದುದನ್ನು ಈಗ ಅಂಕೋಲಾ ತಾಲೂಕಿಗೆ ಸ್ಥಳಾಂತರಿಸಲಾಗಿದೆ. ಸಂಚಾಲಕರಾದ ಶ್ರೀ ವಾಮನ ಹೊದ್ದೈಯವರು ಗಂಗಾವಳಿ ಹೊಳೆಯ ಆಳವೆ ಬಾಗಿಲಿನಲ್ಲಿರುವ ಮಂಜಗುಣಿಯಿಂದ ಕುಂಟಗ್ರಣಿ ಹಿಲ್ಲೂರ ವರೆಗೆ ಹೊಳೆಯ ದಂಡೆಗುಂಟ ಇಲ್ಲವೆ ದಂಡೆಯ ಸಮೀಪವಿರುವ ೪೦ ಹಳ್ಳಿಗಳನ್ನು ಈ ಕಾರ್ಯಕ್ಕಾಗಿ ಆರಿಸಿದ್ದಾರೆ. ಹಿಚ್ಕಡದಲ್ಲಿ ಅವರು ಮುಖ್ಯ ಕಾರ್ಯಾಲಯ ತೆರೆಯುವರು.

ಅಂಕೋಲಾ ತಾಲೂಕಿನ ಡೊಂಗ್ರಿ ಹಾಗು ಕುಂಟಿಗಣಿಗಳಲ್ಲಿ ಅನುಕ್ರಮವಾಗಿ ಸುಮಾರು ೩೬೨ ಮತ್ತು ೨೪೫ ಎಕರೆ ಪಡಭೂಮಿಗಳಿದ್ದು ಅವನ್ನು ಸಾಗುಮಾಡುವುದಕ್ಕಾಗಿ ಅಲ್ಲಿ ನೆಲಿಸಿದ ೫೦ ಹಾಗು ೧೮ ಕುಟುಂಬಗಳಿಗೆ ೧೮ ಸಾವಿರ ರೂಪಾಯಿ ತಗಾಯಿ ಕೊಡಲಾಯಿತು.

ಜಿಲ್ಲೆಯಲ್ಲಿ ಹೆಚ್ಚು ಬೆಳೆ ಬೆಳೆಯಲು ಅನುಕೂಲವಾಗುವಂತೆ ಪ್ರಚಾರ ಮತ್ತು ತಾಲೂಕ

### ದಕ್ಷಿಣ-ಕನ್ನಡ

ದಕ್ಷಿಣ ಕನ್ನಡ ಜಿಲ್ಲಾ ರಾಜಕೀಯ ಸಂತ್ರಸ್ತರಿಗೆ ಭೂದಾನಮೀಯುವ ಸಲಹೆ ಸಮಿತಿಯು ಹೊಸ ಕಲೆಕ್ಟರರಾದ ಶ್ರೀ ಸಯ್ಯದ್ ಅಹಮ್ಮದ್‌ರವರ ಅಧ್ಯಕ್ಷತೆಯಲ್ಲಿ ದಿನಾಂಕ ೮ ರಂದು ಜರಗಿದಾಗ ಶ್ರೀಗಳಾದ ಕೆ. ವಿ. ರಾಮನ್, ಕಾರ್ನಾಡು ಪಾಂಡುರಂಗರಾವ್, ಕೆ. ಈಶ್ವರ ಎಂ. ಎಲ್. ಎ, ಎನ್. ವೇಣುಗೋಪಾಲ ನಾಯ್ಕ, ಅವರು ಕೇಳದ ಸ್ಥಳದಲ್ಲಿ ಭೂಮಿಯನ್ನು ಮಂಜೂರು ಮಾಡಲಾಯಿತು.

ಪುತ್ತೂರು ತಾಲೂಕಿನ ಕೂವೆಟ್ಟು ಎಂಬಲ್ಲಿನ ೩೦೦ ಎಕ್ರೆ ಸ್ಥಳವನ್ನು ಮಾಜಿ ಮೂರ್ತೆದಾರರಿಗೆ ಸಹಕಾರಿ ಪದ್ಧತಿಯ ನಿವಾಸ ಮತ್ತು ಬೇಸಾಯ ಮಾಡಲು ಬಿಟ್ಟುಕೊಡಲಾಗಿದೆ. ಅವರು ೬ ತಿಂಗಳೊಳಗೆ ಬೇಸಾಯ ಮಾಡದಿದ್ದರೆ ಅದನ್ನು ರಾಜಕೀಯ ಸಂತ್ರಸ್ತರಿಗೆ ಹಂಚಿಕೊಡುವುದೆಂದು ನಿರ್ಣಯವಾಗಿದೆ.

ಉದ್ಯ ಗ್ರಾಮದ ಪಟೀಲರಾದ ಶ್ರೀ ಚೆರಿಪಾಡಿ ಕುಂಜಕಣ್ಣನ್‌ರವರನ್ನು ೧೪-೨-೪೮ ರ "ಸ್ವತಂತ್ರ ಭಾರತಂ" ಎಂಬ ಮಲೆಯಾಳಿ ಪತ್ರಿಕೆಯಲ್ಲಿ ಹೀನೈಸಿ ಸುಳ್ಳು ಬರೆದಿರುವರೆಂಬ ಆರೋಪ ವಿಚಾರಣೆ ನಡೆದ, ಹೊಸದುರ್ಗದ ಸೋಷಿಯಲಿಸ್ಟ್ ಪಾರ್ಟಿಯ ಕಾರ್ಯದರ್ಶಿ ಶ್ರೀ ಎನ್. ಕೆ. ಬಾಲಕೃಷ್ಣನ್ ರವರಿಗೆ ರೂ ೩೦೦ ಜುಲ್ಮಾನೆ ತಪ್ಪಿದರೆ ೩ ತಿಂಗಳ ಕಠಿಣ 'ಸಜೆಯನ್ನು, ಸ್ವತಂತ್ರ ಭಾರತಂ ಪತ್ರಿಕೆಯ ಸಂಪಾದಕರಾದ ಶ್ರೀ ಪಿ. ಎಮ್. ಕುಂಜರಾಮನ್ ನಂಬಿಯಾರರಿಗೆ ರೂ. ೧೫೦ ಜುಲ್ಮಾನೆ ತಪ್ಪಿದರೆ ೬ ವಾರಗಳ ಕಠಿಣ ಸಜೆಯನ್ನು ವಿಧಿಸಲಾಗಿದೆ. ಈ ಮೊಕದ್ದಮೆಯಲ್ಲಿ ಸೇರಿದ ಶ್ರೀಧರನ್ ಎಂಬವರನ್ನು ಬಿಡುಗಡೆ ಮಾಡಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಪ್ರದೇಶಗಳಲ್ಲಿ ಎಂಬಂತೆ ನೇಜಿಗೆ (ಭತ್ತದ ಸಸಿ) ಒಂದುರೀತಿಯಹುಳು ವಿಪರೀತವಾಗಿ ಬಿದ್ದಿದೆ. ಕೃತ್ತಿಕಾ ನಕ್ಷತ್ರದಲ್ಲಿ ಮಳೆಸುರಿದುದೇ ಇದಕ್ಕೆ ಕಾರಣನೆಂದು ಹೇಳಲಾಗಿದೆ. ಈ ವರೆಗೆ ರೈತರಿಗೂ ಕೃಷಿ ಇಲಾಖೆಯವರಿಗೂ ಈ ಹುಳುವಿನ ಹಬ್ಬುವಿಕೆಯನ್ನು ತಡೆಗಟ್ಟಲಾಗಲಿಲ್ಲ. ಹೀಗಾಗಿ ಈ ಮಹಾಮಾರಿಗೆ ಹೆದರಿ ರೈತರೆಲ್ಲ ಕಂಗೆಟ್ಟಿರುವರು.

ಸಿರಿಯಾ ನೀರಾವರಿಯೋಜನೆಯ ಅಣೆಕಟ್ಟಿನ ಕೆಲಸವು ಈಗಾಗಲೇ ಮುಕ್ಕಾಲು ಅಂಶ ಪೂರ್ಣವಾಗಿದೆ. ಇನ್ನು ತೋಡುಗಳನ್ನು ತೋಡಬೇಕಾದ ಕೆಲವು ಪ್ರಾರಂಭವಾಗಿದೆ. ಇದು ಸುಮಾರು ೭ ಲಕ್ಷ ರೂಪಾಯಿಯ ಯೋಜನೆಯಾಗಿದೆ.

ಕುಂಬಳೆ ಫಿರ್ಕಾ ಅಭಿವೃದ್ಧಿ ಅಧಿಕಾರಿ ಶ್ರೀ ಎಂ. ಕೆ. ಬಾಬು ಶೆಟ್ಟರ ನೇತೃತ್ವದಲ್ಲಿ ಈ ಕೆಲಸವು ಭರದಿಂದ ಸಾಗುತ್ತಿದೆ. ಈ ಯೋಜನೆಯಿಂದ ೫೦೦ ಎಕ್ರೆಗಳಷ್ಟು ಜಮೀನಿನಲ್ಲ ಎರಡು ಬೆಳೆಗಳಾಗಬಹುದು.

ಉಡ್ಪಿಯಲ್ಲಿ ತೆರೆಯಲಿರುವ ಮಹಾತ್ಮಾ ಗಾಂಧಿ ಸ್ಮಾರಕ ಕಾಲೇಜು ಜೂನ್ ತಿಂಗಳ ಅಂತ್ಯದಲ್ಲಿ ಪ್ರಾರಂಭವಾಗುವ ವ್ಯವಸ್ಥೆ ಮಾಡಲಾಗಿದೆ. ಈ ವರ್ಷ ೬೦ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ; ವಿದ್ಯಾರ್ಥಿನಿಯರಿಗೂ ಪ್ರವೇಶವಿದೆ.

---

ಕಾರುಹುಣ್ಣಿವೆ ಮರುದಿನ ರಾಯಚೂರಲ್ಲಿ ಎತ್ತಿನ ಮೆರವಣಿಗೆ ಹೊರಡಿಸಿದಾಗ ಮೀನಾರ ಮಸೀದೆಯ ಹತ್ತರ ಪುಂಡ ಮುಸಲ್ಮಾನರು ಅವರನ್ನು ತಡೆದು ವಾದ್ಯ ಬಾರಿಸಕೂಡದೆಂದು ತಂಟೆ ತಗೆದು ಎರಡೂ ಗುಂಪುಗಳಲ್ಲಿ ತಿಕ್ಕಾಟವಾಗಿ ೧೧ ಜನರಿಗೆ ಗಾಯಗಳಾದವು.

---

ಮತ್ತು ಗ್ರಾಮ ಸಮಿತಿಗಳನ್ನು ಏರ್ಪಡಿಸುವ ಕೆಲಸವು ಭರದಿಂದ ಸಾಗಿದೆ. ಪಡಭೂಮಿ ಸಾಗು ಮಾಡುವವರಿಗೆ ಅವಶ್ಯಕ ಸೌಕರ್ಯಗಳನ್ನು ಒದವಿಸಲಾಗುತ್ತದೆ. ಸಿದ್ದಾಪುರ ತಾಲೂಕೊಂದರಲ್ಲಿಯೆ ೪೦೦ ಎಕರೆ ಭೂಮಿಯನ್ನು ಬಡ ಬೇಸಾಯಗಾರರಿಗೆ ಸಾಗು ಮಾಡಲು ಕೊಡಲಾಗಿದೆ. ಉಳಿದ ತಾಲೂಕುಗಳಲ್ಲಿಯೂ ಈ ಕ್ರಮ ನಡೆದಿದೆ.

ಸಿದ್ದಾಪುರದ ಬೆಳೆಯಾ ಎಂಬಾತನ ಮೇಲೂ ಶಂಕರ ಸುಬ್ಬಾಭಟ್ಟ ಕರ್ಕಿ ಎಂಬ ಕಾನಭೋಗರ ಮೇಲೂ ಪೋಲೀಸರು ಮಾಡಿದ ಖಟ್ಲೆಯಲ್ಲಿ ಬೆಳೆಯನಿಗೆ ಶಿಕ್ಷೆಯಾಗಿ ಭಟ್ಟರಿಗೆ ಸಂಶಯದ ಲಾಭ ಕೊಟ್ಟು ಬಿಡುಗಡೆ ಮಾಡಲಾಯಿತು.

### ಬಳ್ಳಾರಿ

೧೨ ನೇ ತಾರೀಕಿನ ದಿವಸ ಬಳ್ಳಾರಿ ಸಾಂಬಮೂರ್ತಿ ಮೈದಾನದಲ್ಲಿ ಶ್ರೀ ಎಚ್. ಶೇಷಗಿರಿ ಆಚಾರ್ಯ ಇವರ ಅಧ್ಯಕ್ಷತೆಯಲ್ಲಿ ಸಾಮ್ಯವಾದೀ ಪಕ್ಷದ ಪರವಾಗಿ ಸಭೆ ಸೇರಿ ಡಾ. ಲೋಹಿಯಾ ಮೊದಲಾದವರ ಬಿಡುಗಡೆಯಾಗಬೇಕೆಂದು ಕೇಳಿಕೊಂಡದ್ದಲ್ಲದೆ ಕಾಂಗ್ರೆಸ್ಸಿನ ರೀತಿ ನೀತಿಗಳನ್ನು ತೆಗಳಲಾಯಿತು. ಬಿ. ಭೀಮಸೇನಾಚಾರ, ಕೊಟ್ಟೂರ ದೇವೇಂದ್ರಪ್ಪ, ಯಜಮಾನ ಶಾಂತರುದ್ರಪ್ಪ ಮೊದಲಾದವರು ಭಾಷಣ ಮಾಡಿದರು.

ಹೂವಿನ ಹಡಗಲಿ ತಾಲೂಕು ಉತ್ತಂಗಿಯ ಸಾವಕಾರ ಶ್ರೀ ಕರಿಬಸಪ್ಪನವರು ತಮ್ಮ ಮಗ ಶಿವನಾಗಪ್ಪನ ವಿವಾಹದ ಕಾಲಕ್ಕೆ ಮಾಯಕೊಂಡು ಹಾಯಸ್ಕೂಲ ನಿಧಿಗಾಗಿ ೫೦೧ ರೂಪಾಯಿ ಕಾಣಿಕೆ ಕೊಟ್ಟರು. ಈ ವರೆಗೆ ಇದಕ್ಕಾಗಿ ೨೦ ಸಾವಿರ ರೂಪಾಯಿ ಕೂಡಿವೆ.

ಶಿಡಗಿನಮಳ ಗ್ರಾಮದಲ್ಲಿ ಕೂಡಿದಸಭೆಯಲ್ಲಿ ವಾಲ್ಮೀಕಿನಾಯಕರ ವಿದ್ಯಾರ್ಥಿ ನಿಲಯಕ್ಕೆ ಶ್ರೀ ಕಂಪಲಿ ಯಲಿಗಾರ ಮುಕ್ಕಣ್ಣನವರು ೨೦೦೧ ರೂ. ಅಲ್ಲಾಪುರಂ ಹನುಮಂತಪ್ಪ ೧೦೦೧ ರೂಪಾಯಿ, ಮಲ್ಲಿಕಾರ್ಜುನ ಸೋಮಪ್ಪನವರು ೧೦೦೧ ರೂ. ಮಿಕ್ಕುಳಿದವರು ೪೦೦೧ ರೂ. ಶಿಡಗಿನಮಳದ ನಾಯಕರು ೧೦೦೧ ರೂಪಾಯಿ ಹೀಗೆ ಧನ ಸಹಾಯ ಮಾಡಲು ವಾಗ್ದಾನವಿತ್ತಿದ್ದಾರೆ.

### ವಿಜಾಪುರ

ಜಮಖಂಡಿ ಮಹಾರಾಜರು ಮುಂಬಯಿ ಸರಕಾರದ ಶಿಕ್ಷಣ ಶಾಖೆಗೆ ಒಪ್ಪಿಸಿದ ಪರಶುರಾಮ ನಿವಾಸದಲ್ಲಿ ೧೩ ನೇ ತಾರೀಕು ಸರಕಾರಿ ಕನ್ನಡ ಪ್ರಾಥಮಿಕ ಟ್ರೇನಿಂಗ ಕಾಲೇಜಿನ ಉದ್ಘಾಟನೆಯಾಯಿತು. ಸಂಸ್ಥಾನದ ಹಿಂದಿನ ಮಂತ್ರಿಗಳಾದ ಶ್ರೀ ಜತ್ತಿಯವರು ಈ ಕಾರ್ಯವನ್ನು ನೆರವೇರಿಸಿದರು. ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ರಾಯಣ್ಣನವರು ಪ್ರಾಸ್ತಾವಿಕ ಭಾಷಣ ಮಾಡಿದಬಳಿಕ ಶ್ರೀ ಜತ್ತಿಯವರು ಮಾತಾಡುತ್ತ ಹೊಸ ಕಾಲೇಜನ್ನು ಯಶಸ್ವಿಗೊಳಿಸಲು ಎಲ್ಲರೂ ಸಹಾಯ ಸಹಕಾರ ನೀಡಬೇಕೆಂದು ಹೇಳಿದರು.

ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ೯ ನೇ ತಾರೀಕಿನ ದಿನ ವಿಜಾಪುರಕ್ಕೆ ಬಂದರು. ದಾರಿಯಲ್ಲಿ ಅವರು ನಿಂಬಾಳ ಸ್ಟೇಶನದಲ್ಲಿ ತಮ್ಮ ಬಾಲ್ಯಸ್ನೇಹಿತರಾದ ಪ್ರೊ. ರಾನಡೆಯವರನ್ನು ಕಂಡು ಅವರ ಸ್ವಾಗತವನ್ನು ಸ್ವೀಕರಿಸಿದರು.

### ಕನ್ನಡ ಸಂಸ್ಥಾನ

ಚಿಕ್ಕಮಗಳೂರು ಜಿಲ್ಹೆಯ ಬೀರೂರಿನ ಶ್ರೀಮಂತ ಟಿ. ಸಿ. ಬಸಪ್ಪನವರು ಸರ್ವಾನುಮತದಿಂದ ಪ್ರತಿಸ್ಪರ್ಧಿಗಳಿಲ್ಲದೆ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಆರಿಸಿ ಬಂದಿರುತ್ತಾರೆ.

ರಾಯಚೂರಿನಲ್ಲಿಯ ಮುಸಲ್ಮಾನರು ಕಾಂಗ್ರೆಸ ಸದಸ್ಯರಾಗಲು ನಿರ್ಧರಿಸಿರುವರೆಂದು ತಿಳಿಯುತ್ತದೆ.

ಮೈಸೂರು ನ್ಯಾಯವಿಧಾಯಕ ಸಭೆಯ ಆಯವ್ಯಯ ಅಧಿವೇಶನವು ೨೦ ನೇ ತಾರೀಕಿನಿಂದ ಪ್ರಾರಂಭವಾಗುವದು.



ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಮೊಹರೆಯವರು ಮುದ್ರಿಸಿ ಪ್ರಕಟಿಸಿದರು.